ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಅ.ನ.ಕೃ ರವರ 'ಸಂಧ್ಯಾರಾಗ' ಮತ್ತು ತ.ರಾ.ಸು ಅವರ 'ಹಂಸಗೀತೆ' ಕಾದಂಬರಿಗಳ ತೌಲನಿಕ ಅಧ್ಯಯನ

೨೦೧೫-೧೬ನೇ ಸಾಲಿನ ಎಂ.ಫಿಲ್ ಪದವಿಗಾಗಿ ಅರ್ಪಿಸಿದ ನಿಬಂಧ

ನಿಬಂಧಕಾರರು

ಮಮತ.ಎಂ

ನೋಂದಣಿ ಸಂಖ್ಯೆ : ೧೫೧೨೦೧೫೦೦೬೮

ಕನ್ನಡ ಎಂ.ಫಿಲ್ (ಹಂಪಿ ಕ.ವಿ.ವಿ.)

ಮಾನ್ಯತಾ ಸಂಸ್ಥೆ

ಕರ್ನಾಟಕ ಸಂಘ,

ಮಂಡ್ಯ

ಮಾರ್ಗದರ್ಶಕರು

ಡಾ॥ ಮ.ರಾಮಕೃಷ್ಣ

ಸಹ ಪ್ರಾಧ್ಯಾಪಕರು

ಕನ್ನಡ ವಿಭಾಗ,

ಭಾರತೀ ಕಾಲೇಜು, ಭಾರತೀ ನಗರ,



ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩೨೭೬

ಕನ್ನಡ ವಿಶ್ವವಿದ್ಯಾಲಯ, ಹಂಪಿ.

# ಅ.ನ.ಕೃ.ರವರ 'ಸಂಧ್ಯಾರಾಗ' ಮತ್ತು ತ.ರಾ.ಸು ರವರ 'ಹಂಸಗೀತೆ' ಕಾದಂಬರಿಗಳ ತೌಲನಿಕ ಅಧ್ಯಯನ

೨೦೧೫–೧೬ನೇ ಸಾಲಿನ ಎಂ.ಫಿಲ್., ಪದವಿಗಾಗಿ ಅರ್ಪಿಸಿದ ನಿಬಂಧ



ನಿಬಂಧಕಾರರು
ಮಮತ ಎಂ.
ನೋಂದಣಿ ಸಂಖ್ಯೆ : ೧೫೧೨೦೧೩೦೦೬೮
ಮಾನ್ಯತಾ ಸಂಸ್ಥೆ
ಕರ್ನಾಟಕ ಸಂಘ,
ಮಂಡ್ಯ.

ಮಾರ್ಗದರ್ಶಕರು
ಡಾ॥ ಮ.ರಾಮಕೃಷ್ಣ
ಸಹ ಪ್ರಾಧ್ಯಾಪಕರು
ಕನ್ನಡ ವಿಭಾಗ,
ಭಾರತೀ ಕಾಲೇಜು, ಭಾರತೀ ನಗರ.




ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ಹಂಪಿ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩೨೭೬

## ಮಾರ್ಗದರ್ಶಕರ ಪ್ರಮಾಣಪತ್ರ

ನೋಂದಣಿ ಸಂಖ್ಯೆ ೧೫೧೨೦೧೩೦೦೬೮ ರ ವಿದ್ಯಾರ್ಥಿಯು ನನ್ನ ಮಾರ್ಗದರ್ಶನದಲ್ಲಿ ಕನ್ನಡ ಎಂ.ಫಿಲ್ ಪದವಿಗಾಗಿ ಎರಡನೇ ಚತುರ್ಮಾಸಕ್ಕೆ ಸಂಬಂಧಿಸಿದಂತೆ 'ಅ.ನ.ಕೃ' ರವರ 'ಸಂಧ್ಯಾರಾಗ' ಮತ್ತು 'ತ.ರಾ.ಸು' ರವರ 'ಹಂಸಗೀತೆ' ಕಾದಂಬರಿಗಳ ತೌಲನಿಕ ಅಧ್ಯಯನ ಎಂಬ ಶೀರ್ಷಿಕೆಯ ಅಡಿಯಲ್ಲಿ ಸಂಶೋಧನಾ ನಿಬಂಧವನ್ನು ಸಿದ್ದಪಡಿಸಿರುತ್ತಾರೆ. ಈ ನಿಬಂಧವು ಈ ಮೊದಲು ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಯಾವುದೇ ಪದವಿ, ಡಿಪ್ಲೋಮಾಗಳಿಗೆ ಒಪ್ಪಿಸಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ಮಾನ್ಯತಾ ಸಂಸ್ಥೆ
ಕರ್ನಾಟಕ ಸಂಘ, ಮಂಡ್ಯ

ಮಾರ್ಗದರ್ಶಕರು

(ಡಾ॥ ಮ.ರಾಮಕೃಷ್ಣ)
ಸಹ ಪ್ರಾಧ್ಯಾಪಕರು
ಕನ್ನಡ ವಿಭಾಗ,
ಭಾರತೀ ಕಾಲೇಜು, ಭಾರತೀ ನಗರ.

# ಅಭ್ಯರ್ಥಿಯ ಘೋಷಣಾ ಪತ್ರ

ನೋಂದಣಿ ಸಂಖ್ಯೆ ೧೫೧೨೦೧೩೦೦೬೮ ರ ವಿದ್ಯಾರ್ಥಿಯಾದ ನಾನು 'ಅ.ನ.ಕೃ' ರವರ 'ಸಂಧ್ಯಾರಾಗ' ಮತ್ತು 'ತ.ರಾ.ಸು' ರವರ 'ಹಂಸಗೀತೆ' ಕಾದಂಬರಿಗಳ ತೌಲನಿಕ ಅಧ್ಯಯನ ಎಂಬ ಸಂಶೋಧನಾ ನಿಬಂಧವನ್ನು ಕನ್ನಡ ಎಂ.ಫಿಲ್ ಎರಡನೇ ಚತುರ್ಮಾಸದ ಪರೀಕ್ಷೆಗಾಗಿ ಹಂಪಿ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿದ್ದೇನೆ.

ನಾನು ಈ ನಿಬಂಧವನ್ನು ಈ ಮೊದಲು ಯಾವುದೇ ಪದವಿ, ಡಿಪ್ಲೊಮಾ, ಎಂ.ಫಿಲ್ ಅಥವಾ ತತ್ಸಮಾನ ಪದವಿಗಾಗಲಿ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಸ್ಥಳ : ಮಾನ್ಯತಾ ಸಂಸ್ಥೆ,**
**ಕರ್ನಾಟಕ ಸಂಘ, ಮಂಡ್ಯ**

**ನಿಬಂಧಕಾರರು**
ಮಮತ. ಎಂ.
(ಮಮತ.ಎಂ)
2015–16ನೇ ಸಾಲಿನ ಕನ್ನಡ ಎಂ.ಫಿಲ್ ವಿದ್ಯಾರ್ಥಿ
ಹಂಪಿ ವಿಶ್ವವಿದ್ಯಾನಿಲಯ,
ಹಂಪಿ

## ಪರಿವಿಡಿ

## ಅಧ್ಯಯನದ ಉದ್ದೇಶ ಮತು ವ್ಯಾಪ್ತಿ

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಅ.ನ.ಕೃ ಮತ್ತು ತ.ರಾ.ಸು ಅವರು ಪ್ರಗತಿಶೀಲ ಸಾಹಿತ್ಯದಲ್ಲಿ ಕಂಡುಬರುವ ಪ್ರಮುಖ ಲೇಖಕರಾಗಿದ್ದಾರೆ. ಕನ್ನಡ ಸಾಹಿತ್ಯ ಲೋಕದಲ್ಲಿ ಕಾದಂಬರಿಕಾರರಾಗಿ ಪರಿಚಿತರಾಗಿರುವವರು ಇವರು. ಕಥಾ ಕೌಶಲ್ಯ, ನಿರರ್ಗಳವಾದ ನಿರೂಪಣಾ ಶೈಲಿ, ಸಂಭಾಷಣೆಯ ಚಾತುರ್ಯತೆ ಮತ್ತು ವಸ್ತುವಿನ ಆಯ್ಕೆ ಇವುಗಳ ಮುಖಾಂತರ ಓದುಗರ ಮನಸ್ಸನ್ನು ಸೆರೆ ಹಿಡಿದಿದ್ದಾರೆ.

'ಸಂಧ್ಯಾರಾಗ' ಮತ್ತು 'ಹಂಸಗೀತೆ' ಕಾದಂಬರಿಗಳನ್ನು ತೌಲನಿಕವಾಗಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಮುಖ್ಯಕಾರಣವೆಂದರೆ ಕಲಾವಿದ ಚಿತ್ರಗಾರನಿರಲಿ, ಗಾಯಕನಿರಲಿ, ಸಾಹಿತಿಯಾಗಿರಲಿ ಜೀವನದ ಸಮುಷ್ಟಿಯ ಕಡೆಗೇ ಬರುತ್ತಾನೆ. ಮೊದಲು ಯಾವುದು ಭಿನ್ನವೋ ಅದರ ಪೂರ್ಣತೆಯು ಅವನಿಗೆ ಗೋಚರವಾಗುತ್ತದೆ. ಆಗಲೇ ಅವನ ಜೀವನ ಪೂರ್ಣವಾಗುವುದು, ಬಾಳು ಸಾರ್ಥಕವಾಗುವುದು. ಅಂತಹ ಆದರ್ಶದ ಕಡೆಗೆ ಸಾಗಿದ ಕಲಾವಿದರ ಹೋರಾಟದ ಚಿತ್ರಣ ಇಲ್ಲಿದೆ. ಕಲೆಗಳಲ್ಲಿ ೫ ವಿಧ ಶಿಲ್ಪ, ಚಿತ್ರಕಲೆ, ಅಭಿನಯ, ಸಂಗೀತ, ಸಾಹಿತ್ಯ. ಇವು ಭಾವನೆಗಳನ್ನು ಅಭಿವ್ಯಕ್ತಿಸಲು ಇರುವ ಭಿನ್ನ ಮಾರ್ಗಗಳು. ಇದರಿಂದ ನೋಡುಗರಿಗೆ ಮತ್ತು ಕೇಳುಗರಿಗೆ ಆನಂದ ಉಂಟಾಗುತ್ತದೆ. ಅಂತಹ ಸಂಗೀತ ಕಲೆಯ ಅಭಿವ್ಯಕ್ತಿ ಈ ಕಾದಂಬರಿಗಳಲ್ಲಿ ಆಗಿರುವುದರಿಂದ ಇವುಗಳನ್ನು ತೌಲನಿಕದ ಅಧ್ಯಯನದ ಮೂಲಕ ವಿಶ್ಲೇಷಿಸಲಾಗಿದೆ.

**ವ್ಯಾಪ್ತಿ:-**

ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ 'ಸಂಧ್ಯಾರಾಗ' ಮತ್ತು 'ಹಂಸಗೀತೆ' ಕಾದಂಬರಿಗಳು ಸಾಮಾಜಿಕ ಕಾದಂಬರಿಗಳಾಗಿವೆ. ಕಲಾವಿದರ ಜೀವನದ ಸೋಲು ಗೆಲುವುಗಳನ್ನು ಈ ಕಾದಂಬರಿಯಲ್ಲಿ ತೆರೆದಿಟ್ಟಿದ್ದಾರೆ. ವಸ್ತು ವೈವಿಧ್ಯತೆ, ತಂತ್ರ ನಿರೂಪಣೆ ಇವೆಲ್ಲವೂ ಕೂಡ ಇಲ್ಲಿ ಕಾದಂಬರಿಗಳಾಗಿ ಜೀವಂತಿಕೆಯನ್ನು ತಂದುಕೊಟ್ಟಿದೆ. ನೃತ್ಯವಾಗಲಿ, ಸಂಗೀತವಾಗಲಿ ಅದರ ಬಗೆಗಿನ ಅಭಿಮಾನ ದೈವಿಕವಾದುದೆಂದು ನಂಬಿದವರು ತ.ರಾ.ಸು ಮತ್ತು ಅ.ನ.ಕೃ ಅವರು. ಸಂಗೀತದ ವಿಚಾರ ಮಾತನಾಡುವಾಗಲೆಲ್ಲ ಕಲೆಯನ್ನು ದೈವತ್ವಕ್ಕೆ ಏರಿಸಿರುವುದರಿಂದ ಅದರ ಬಗೆಗೆ ಗೌರವಗಳು ಮೂಡುತ್ತವೆ. ಸರಳ ಶೈಲಿಯಲ್ಲಿ ಕಾದಂಬರಿ ಪಾತ್ರಗಳ ಭಾವ ಅಭಿವ್ಯಕ್ತಗೊಂಡಿದೆ. ಅಧ್ಯಯನದ ಅನುಕೂಲಕ್ಕಾಗಿ ನಿಬಂಧವನ್ನು ೫ ಅಧ್ಯಾಯಗಳಾಗಿ ವಿಭಾಗಿಸಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಕಾದಂಬರಿಕಾರರ ಜೀವನ ಮತ್ತು ಸಾಹಿತ್ಯವನ್ನು ಪರಿಚಯ ಮಾಡಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಕಾದಂಬರಿಗಳ ಕಥಾವಸ್ತುವನ್ನು ಕುರಿತು ವಿವೇಚಿಸಲಾಗಿದೆ. ಮೂರನೆಯ ಅಧ್ಯಾಯದಲ್ಲಿ ಕಾದಂಬರಿಗಳ ತೌಲನಿಕ ವಿಶ್ಲೇಷಣೆ ಮಾಡಲಾಗಿದೆ. ನಾಲ್ಕನೆಯ ಅಧ್ಯಾಯದಲ್ಲಿ ಕಾದಂಬರಿಗಳಲ್ಲಿ ಬರುವ ಪಾತ್ರ ಚಿತ್ರಣವನ್ನು ನೀಡಲಾಗಿದೆ. ಐದನೆಯ ಅಧ್ಯಾಯದಲ್ಲಿ ಭಾಷೆ ಮತ್ತು ಶೈಲಿಯನ್ನು ತಿಳಿಸಲಾಗಿದೆ. ಒಟ್ಟಾರೆಯಾಗಿ ಅಧ್ಯಯನದ ಫಲಿತತೆಯನ್ನು ಸಮಾರೋಪದಲ್ಲಿ ನೀಡಲಾಗಿದೆ.

# ಅಧ್ಯಾಯ - ೧

# ಕಾದಂಬರಿಕಾರರ ಜೀವನ ಮತ್ತು ಸಾಹಿತ್ಯ

## ಅ.ನ.ಕೃ ಅವರ ಜೀವನ ಮತ್ತು ಸಾಹಿತ್ಯ:-

ಅರಕಲಗೂಡು ನರಸಿಂಗರಾಯ ಕೃಷ್ಣರಾಯ 'ಅ.ನ.ಕೃ' ಎಂದು ಸಂಕ್ಷಿಪ್ತನಾಮದಿಂದ ಕನ್ನಡ ನಾಡಿನಲ್ಲಿ ಜನಪ್ರಿಯರಾಗಿದ್ದಾರೆ. ಸುಮಾರು ೧೯೦ ಕೃತಿಗಳನ್ನು ರಚಿಸಿದ್ದಾರೆ. ಅವರ ವೈವಿಧ್ಯಮಯ ಬರವಣಿಗೆಗಳ ನಡುವೆ ಅವರನ್ನು ಮುಖ್ಯವಾಗಿ ಗುರುತಿಸುವುದು ಕಾದಂಬರಿಕಾರರಾಗಿ. ಅವರ ಇಡೀ ಬದುಕನ್ನು ಪರಿಶೀಲಿಸಿದಾಗ ಮುಖ್ಯವಾಗಿ ಕಂಡುಬರುವ ಮನೋಧರ್ಮ 'ಕರ್ನಾಟಕತ್ವ'. ಅನಕೃ ಅವರ ಬದುಕನ್ನು ಮರೆತು ಕೇವಲ ಅವರ ಸಾಹಿತ್ಯ ನಿರ್ಮಿತಿಯನ್ನು ಮಾತ್ರ ಗಮನಿಸುವುದರಿಂದ ಅವರ ವ್ಯಕ್ತಿತ್ವ ಪೂರ್ಣವಾಗುವುದಿಲ್ಲ. ಹಾಗಾಗಿ ಇವರ ಜೀವನದ ಅಂಶಗಳನ್ನು ತಿಳಿದುಕೊಳ್ಳುವುದೂ ಕೂಡ ಅತ್ಯಂತ ಮುಖ್ಯವಾಗುತ್ತದೆ.

ಅರಕಲಗೂಡು ಹಾಸನ ಜಿಲ್ಲೆಯಲ್ಲಿರುವ ಒಂದು ಊರು. ಅ.ನ.ಕೃ ವಂಶಜರು ಬಾಳಿ ಬದುಕಿದ ಸ್ಥಳ. ಅ.ನ.ಕೃ ರವರ ತಾತನವರಾದ ಕೃಷ್ಣಪ್ಪನವರು ಪಾಳಯಗಾರರಿಗೆ, ಸಲಹೆಗಾರರಾಗಿದ್ದವರು. ದೊಡ್ಡ ವಿದ್ವಾಂಸರು. ಕನ್ನಡ ಮತ್ತು ತೆಲುಗಿನಲ್ಲಿ ಕೃತಿ ರಚನೆಯನ್ನು ಮಾಡಿದವರು. ತಂದೆ ನರಸಿಂಗರಾಯರು ಕಂದಾಯ ಇಲಾಖೆಯಲ್ಲಿ ಕೆಲಸದಲ್ಲಿದ್ದರೂ, ಆಗಿನ ಬೆಂಗಳೂರಿನ ಸಾಂಸ್ಕೃತಿಕ ವಲಯದಲ್ಲಿ ಮರೆಯಲಾಗದ ಹೆಸರು. ಜೊತೆಗೆ ಅನೇಕ ಸಂಘಸಂಸ್ಥೆಯೊಂದಿಗೆ ನಿಕಟ ಸಂಪರ್ಕವನ್ನು ಹೊಂದಿದ್ದರು. ಅ.ನ.ಕೃ ಅವರ ತಾಯಿ ಅನ್ನಪೂರ್ಣಮ್ಮ ಶ್ರದ್ಧಾಭಕ್ತಿಗಳಿಂದ ಮಾಧ್ವ ಸಂಪ್ರದಾಯದ ಧಾರ್ಮಿಕ ಮನೋಧರ್ಮವುಳ್ಳವರು. ಮೇ.೯.೧೯೦೮ ರಂದು ಅ.ಸ.ಕೃ ಈ ತಂದೆ ತಾಯಿಯ ಮೂರನೆಯ ಮಗನಾಗಿ ಕೋಲಾರದಲ್ಲಿ ಜನಿಸಿದರು.

ಅ.ನ.ಕೃ ಕಾಲೇಜು ಮೆಟ್ಟಿಲು ಹತ್ತಿದವರಲ್ಲ ಅವರಿಗೆ ಕಾಲೇಜಿನ ಓದು, ಪದವಿ, ಸರ್ಕಾರಿ ಉದ್ಯೋಗ ಇವುಗಳ ಕಡೆಗೆ ಹೆಚ್ಚಿನ ಆಸಕ್ತಿ ಹೊರಳಲಿಲ್ಲ. ಅವರ ಓದಿನ ದಾಹವನ್ನು ಗ್ರಂಥಾಲಯಗಳು ಪೂರೈಸಿದವು. ಅವರ ಓದು, ಅವರ ಬದುಕಿನ ಕೌಟುಂಬಿಕ ಪರಿಸರ, ಸಂಪರ್ಕಕ್ಕೆ ಬಂದ ವ್ಯಕ್ತಿಗಳು, ಸಂಸ್ಥೆಗಳು, ಅವರು ಒಡನಾಡಿದ ವ್ಯಕ್ತಿಗಳು, ಬದುಕು ಕಲಿಸಿದ ಪಾಠಗಳು ಅ.ನ.ಕೃ ಅವರನ್ನು ರೂಪಿಸಿವೆ. ಇವೆಲ್ಲವೂ ಅವರ ಸೃಜನಶೀಲ ಬರಹಗಳಲ್ಲಿ ಹಾಸುಹೊಕ್ಕಾಗಿವೆ. ತಂದೆ

ತಾಯಿಯರು ಬಾಳಿದ ಸುಸಂಸ್ಕೃತ ಬದುಕು, ಧಾರಾಳ ಗುಣ, ದೇಶೀಯ ವಿದ್ಯಾಶಾಲೆಯಲ್ಲಿ ಸಂಪದ್ಗಿರಿರಾಯರು ಅವರ ಮೇಲೆ ಪ್ರಭಾವ ಬೀರಿದ ವ್ಯಕ್ತಿಗಳು. ಕಂದಾಡೆ ಕೃಷ್ಣಯ್ಯಂಗಾರ್ ಕೊಟ್ಟ ಶಿಕ್ಷಣ, ಶಾಂತಿನಿಕೇತನದಲ್ಲಿ ರವೀಂದ್ರರು, ನಂದಲಾಲ್ ಬಸು ಅವರು ಬೀರಿದ ಪ್ರಭಾವ. ನಾಡು-ನುಡಿ ಪರಂಪರೆ, ಸಂಸ್ಕೃತಿಯ ಮೇಲೆ ಅಭಿಮಾನ ಮೂಡುವಂತೆ ಮಾಡಿದ ಅಲ್ಲಿನ ಕೆಲವು ಘಟನೆಗಳು - ಇವೆಲ್ಲವೂ ಸೇರಿ ಅ.ನ.ಕೃ ಅವರ ವ್ಯಕ್ತಿತ್ವವನ್ನು ರೂಪಿಸಿವೆ. ಅ.ನ.ಕೃ ಬಯಸಿ ಬಯಸಿ ಬರಹಗಾರನ ಬದುಕನ್ನು ಆರಿಸಿಕೊಂಡರು. ಅವರು ಬರಹವನ್ನು ಅರೆಕಾಲಿಕ ವ್ಯಕ್ತಿಯಾಗಿ ಸ್ವೀಕರಿಸದೆ ಪೂರ್ಣ ಕಾಲದ ವೃತ್ತಿಯನ್ನಾಗಿ ಸ್ವೀಕರಿಸಿ ಐದು ದಶಕಗಳ ಕಲ ಸಾಹಿತ್ಯ ಸೇವೆ ಮಾಡಿದರು. ಕರ್ನಾಟಕದಾದ್ಯಂತ ಸಂಚರಿಸಿ ನಾಡು-ನುಡಿ, ಸಾಹಿತ್ಯ-ಸಂಸ್ಕೃತಿಯ ಬಗೆಗೆ ಜನರಿಗೆ ತಿಳುವಳಿಕೆ ನೀಡಿದರು. ಅವರೊಬ್ಬ ಉಜ್ವಲ ವಾಗ್ಮಿ. ಸಾಹಿತ್ಯ ಕಲೆಗಳ ಬಗೆಗೆ ಅವರು ಪಡೆದುಕೊಂಡಿದ್ದ ಜ್ಞಾನ ಅಪಾರವಾದುದು. ತಮ್ಮ ಉಪನ್ಯಾಸ ಬರಹಗಳ ಮೂಲಕ ಅವುಗಳ ಬಗೆಗೆ ಮನೋಜ್ಞವಾಗಿ ಪರಿಚಯ ಮಾಡಿಕೊಟ್ಟಿರುವರು. ಅವರು ಪೂರ್ಣಪ್ರಮಾಣದ ಬರಹಗಾರರಾಗಿ ಬರವಣಿಗೆಯನ್ನೇ ಬದುಕಿನ ನಿರ್ವಹಣೆಗೆ ಅವಲಂಬಿಸಿದ್ದರಿಂದ ಅಪಾರ ಕಷ್ಟಗಳನ್ನು ಎದುರಿಸಬೇಕಾಯಿತು.

ಅ.ನ.ಕೃ ಅವರು ಬದುಕಿದ್ದು ೬೩ ವರ್ಷ[೧೯೦೮-೧೯೭೧] ಆದರೆ ಅವರು ನಾಡು-ನುಡಿ, ಸಾಹಿತ್ಯ ಸಂಸ್ಕೃತಿಯ ಉಳಿವಿಗಾಗಿ ಬೆಂಗಳೂರಿನಲ್ಲಿ ನಡೆದ ಕನ್ನಡದ ಅಳಿವು ಉಳಿವಿಗಾಗಿ ದೊಡ್ಡ ಚಳುವಳಿ ನಡೆಸಿದರು. ಅಂದು ಅವರು ಚಳುವಳಿ ನಡೆಸದಿದ್ದರೆ, ಕನ್ನಡಿಗರಿಗೆ ಉದ್ಯೋಗ ದೊರೆಯುತ್ತಿರಲಿಲ್ಲ. ನಾಡು-ನುಡಿ, ಸಾಹಿತ್ಯ ಸಂಸ್ಕೃತಿಯ ಬಗೆಗೆ ಜಾಗೃತಿ ಮೂಡುತ್ತಿರಲಿಲ್ಲ. ಅನ್ಯಭಾಷೆಗಳ ಆಕ್ರಮಣದಲ್ಲಿ ಕನ್ನಡ ಚಲನಚಿತ್ರಗಳಿಗೆ ಉಳಿಗಾಲವಿರುತ್ತಿರಲಿಲ್ಲ. ಕನ್ನಡಿಗರಲ್ಲಿ ಕನ್ನಡ ಪುಸ್ತಕಗಳನ್ನು ಓದುವ ಅಭಿರುಚಿ ನಿರ್ಮಾಣವಾಗುತ್ತಿರಲಿಲ್ಲ. ಕನ್ನಡದಲ್ಲಿ ಮಾತನಾಡಬೇಕು ಎನ್ನುವ ಹುಮ್ಮಸ್ಸು ಬರುತ್ತಿರಲಿಲ್ಲ. ಅವರು ಮಾಡಿದ ಕನ್ನಡ ಪರವಾದ ಜಾಗೃತಿ ಇಡೀ ಕರ್ನಾಟಕಕ್ಕೆ ವ್ಯಾಪಿಸಿತು. ಕನ್ನಡಿಗರಲ್ಲಿ ಸುಪ್ತವಾಗಿದ್ದ ಕನ್ನಡ ತನವನ್ನು ಅವರು ಎಚ್ಚರಿಸಿದರು. ಅದಕ್ಕಾಗಿ ನಾವು ಅವರಿಗೆ ಕೃತಜ್ಞರಾಗಿರಬೇಕು. ನವೋದಯ ಸಾಹಿತ್ಯ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ಕನ್ನಡ ಸಾಹಿತ್ಯಕ್ಕೊಂದು ಹೊಸ ಆಯಾಮ ದೊರಕಿಸಿಕೊಡಬೇಕೆಂದು ಸಂಕಲ್ಪಿಸಿ ಪ್ರಗತಿಶೀಲ ಚಳುವಳಿಯನ್ನು ಹುಟ್ಟುಹಾಕಿದವರಲ್ಲಿ ಅ.ನ.ಕೃ ಮುಖ್ಯರು. ಶಾಲಾ ಜೀವನದಲ್ಲಿ ಬಿ.ವೆಂಕಟಾಚಾರ್ಯ ಹಾಗೂ ಗಳಗನಾಥರ ಅನುವಾದಿತ ಕಾದಂಬರಿಗಳ ಓದು ಮತ್ತು ಎಂ. ಎಸ್. ಪುಟ್ಟಣ್ಣನವರ ಕೃತಿಗಳ ಅಧ್ಯಯನ ಮುಂದೆ ಕಾದಂಬರಿಯನ್ನೇ ಅ.ನ.ಕೃ ತಮ್ಮ ಸೃಜನ ಶೀಲಾ ಮಾಧ್ಯಮವಾಗಿ ಆರಿಸಿಕೊಳ್ಳಲು ಪ್ರೇರಣೆ ಒದಗಿಸಿತು. ತಮ್ಮ ಹದಿನಾರನೆಯ ವಯಸ್ಸಿನಲ್ಲಿಯೇ ತಂದೆಯ

ಸ್ನೇಹಿತರಾದ ಅಭಿಜಾತನಟ ಎ.ಒ. ವರದರಾಜ್ ಒಡ್ಡಿದ ಸವಾಲಿಗೆ ಉತ್ತರವಾಗಿ ಒಂದೇ ರಾತ್ರಿಯಲ್ಲಿ 'ಮದುವೆಯೋ ಮನೆಹಾಳೋ' (೧೯೨೪) ನಾಟಕವನ್ನು ಬರೆದರು. ೧೯೨೮ ರಲ್ಲಿ 'ಶಾಂತಿನಿಕೇತನ'ದ ವಿದ್ಯಾಭ್ಯಾಸ ಪದ್ಧತಿಗೆ ಆಕರ್ಷಿತರಾಗಿ ರವೀಂದ್ರನಾಥಠಾಗೂರ್ ಮತ್ತು ನಂದಲಾಲ್ ಬೋಸ್ ಮುಂತಾದ ಕಲಾವಿದರೊಂದಿಗೆ ಕೆಲವು ತಿಂಗಳುಗಳ ಕಾಲ ಇದ್ದು ಕನ್ನಡದ ಮೇಲಿನ ಅಭಿಮಾನದಿಂದ ಕನ್ನಡ ನಾಡಿಗೆ ಹಿಂದಿರುಗಿದರು. ಸಣ್ಣ ಕಥೆಗಳಿಗೆ ಮೀಸಲಾದ 'ಕಥಾಂಜಲಿ' ಮಾಸ ಪತ್ರಿಕೆಯನ್ನು ಪ್ರಾರಂಭಿಸಿದರು. ಆನಂದ, ರಾಶಿ, ರಾಜರತ್ನಂ, ಕೆ. ಗೋಪಾಲ ಕೃಷ್ಣರಾಯರು ಮುಂತಾದ ಪ್ರತಿಭಾನ್ವಿತ ಲೇಖಕರನ್ನು ಬೆಳಕಿಗೆ ತಂದರು. ಅಂದಿನ 'ವಿಶ್ವ ಕರ್ನಾಟಕ' ದಲ್ಲಿ ಕರ್ನಾಟಕದ ಬಗ್ಗೆ, ಲಲಿತ ಕಲೆಗಳ ಬಗ್ಗೆ ಅನೇಕ ಲೇಖನಗಳನ್ನು ಪ್ರಕಟಿಸಿದರು. ೧೯೩೦ ರಲ್ಲಿ ಧಾರವಾಡದಲ್ಲಿ ನಡೆದ ಮೊದಲ ಸಮ್ಮೇಳನಕ್ಕೆ ಅತಿಥಿಯಾಗಿ ಹೋದರು. ಅನಂತರ ತಮ್ಮ ಕನಸಿನ ಅಖಂಡ ಕರ್ನಾಟಕದ ಸಂಘಟನೆಗಾಗಿ ಹಲವು ಬಾರಿ ಕನ್ನಡ ನಾಡನ್ನು ಸುತ್ತಾಡಿದರು.

ಅ.ನ.ಕೃ ಮದುವೆಗೆ ಮೊದಲು ಕನ್ನಡದಲ್ಲಿ ಮೊದಲನೆಯ ಬಾರಿಗೆ 'ಪ್ರಣಯಗಿತೆಗಳು' [೧೯೩೦] ಸಂಕಲನವನ್ನು ಸಂಪಾದಿಸಿ ಪ್ರಕಟಿಸಿದರು. ೨೪ನೆಯ ವಯಸ್ಸಿನಲ್ಲಿ ಹೈದರಾಬಾದಿನ ಎಚ್. ವಿ. ಕೃಷ್ಣರಾಯರ ಮಗಳಾದ ವಿಶಾಲಾಕ್ಷಿಯನ್ನು ಕೈ ಹಿಡಿದರು. ಇವರೇ ಮುಂದೆ ವಸಂತಾದೇವಿಯಾದರು. ಅವರ ಹೈದರಾಬಾದ್, ಮುಂಬಯಿಗಳ ಓಡಾಟದ ಕಾಲದಲ್ಲಿ ಚಿತ್ರಕಲೆಯ ಬಗ್ಗೆ ಆಸಕ್ತಿಯನ್ನು ತಳೆದರು. ೧೯೩೨ ರಲ್ಲಿ ಬರೆದ 'ಭಾರತೀಯ ಚಿತ್ರಕಲೆಯಲ್ಲಿ ರಾಜಾರವಿವರ್ಮನ ಸ್ಥಾನ', ಕನ್ನಡದಲ್ಲಿ ಚಿತ್ರಕಲಾ ವಿಮರ್ಶೆ ಒಳಗೊಂಡ ಮೊದಲ ಪುಸ್ತಕ.

೧೯೩೫ ರಲ್ಲಿ ಪತ್ರಿಕೋದ್ಯಮ ಅ.ನ.ಕೃ ಅವರನ್ನು ಮುಂಬಯಿಗೆ ಸೆಳೆಯಿತು. The Bombay chronicle and the Illustrated weekly of India ದಲ್ಲಿಅನೇಕ ಲೇಖನಗಳನ್ನು ಬರೆದರು ಮತ್ತೆ ಅವರಿಗೆ ಕನ್ನಡ ನಾಡಿನಿಂದ ಕರೆ ಬಂದಿತು.

೧೯೩೬-೩೭ ರಲ್ಲಿ 'ವಿಶ್ವವಾಣಿ'ಯ ಸಂಪಾದಕರಾಗಿ ೧೯೩೭ ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ 'ಕನ್ನಡ ನುಡಿ'ಯ ಸಂಪಾದಕರಾದರು. ಅಂದಿನ ಕರ್ನಾಟಕದ ರಾಜಾಕೀಯ ಆರ್ಥಿಕ ಸ್ಥಿತಿಗತಿಗಳನ್ನು ಕುರಿತು ಅನೇಕ ಲೇಖನಗಳನ್ನು ಹರಿತವಾಗಿ ಬರೆದರು. ೧೯೪೫ ರಲ್ಲಿ ಮುಧೋಳದಲ್ಲಿ ನಡೆದ ಕರ್ನಾಟಕ ಏಕೀಕರಣ ಸಭೆಯಲ್ಲಿ ಭಾಗವಹಿಸಿದರು.

೧೯೪೦ರಲ್ಲಿ ಪ್ರಗತಿಶೀಲ ಸಾಹಿತ್ಯ ಚಳುವಳಿ ಕನ್ನಡ ಸಾಹಿತ್ಯದ ಹೊಸ ತಿರುವಿಗೆ, ಲವಲವಿಕೆಗೆ, ವಾಗ್ವಾದಕ್ಕೆ ಕೇಂದ್ರಬಿಂದುವಾಯಿತು. ತ.ರಾ.ಸು ಶ್ರೀರಂಗ, ನಿರಂಜನ, ಬಸವರಾಜ ಕಟ್ಟೀಮಣಿ, ಚದುರಂಗ, ಎಸ್. ಅನಂತನಾರಾಯಣ, ಮಾ.ನಾ.ಚೌಡಪ್ಪ, ಡಿ. ಕೆ.ಭಾರಧ್ವಾಜ್ ಮುಂತಾದವರು ಈ ಚುನಾವಣೆಯ ಮುಂಚೂಣಿಯಲ್ಲಿದ್ದರು.

೧೯೩೫ರಲ್ಲಿ ಇ.ಎಂ.ಫಾಸ್ಟರ್ ಅಧ್ಯಕ್ಷತೆಯಲ್ಲಿ ಪ್ಯಾರಿಸ್ ಪ್ರಗತಿಶೀಲರ ಪ್ರಥಮ ಅಧಿವೇಶನ ನಡೆಯಿತು. ೧೯೩೬ರಲ್ಲಿ ಪ್ರೇಮ್‌ಚಂದರ ಅಧ್ಯಕ್ಷತೆಯಲ್ಲಿ ಭಾರತೀಯ ಲೇಖಕರ ಪ್ರಥಮ ಪ್ರಗತಿಶೀಲ ಸಮ್ಮೇಳನ ಲಕ್ನೋದಲ್ಲಿ ಜರುಗಿತು. ಭಾರತ ಕಮ್ಯುನಿಸ್ಟ್ ಪಕ್ಷದ ಉದಯ, ಕಾಂಗ್ರೆಸ್ಸಿನಲ್ಲಿ ಸೋಶಿಯಲಿಸ್ಟ್ ಪಂಥದ ಬಂಡಾಯ, ಎರಡನೇ ಮಹಾಯುದ್ಧದ ಕಾವು, ಬುದ್ಧಿ ಜೀವಿಗಳಿಗೆ ಹೊಸ ಸಮಾಜದ ಕನಸು, ಹೊಸ ಮೌಲ್ಯಗಳ ಹುಡುಕಾಟಕ್ಕೆ ಈ ಘಟನೆಗಳು ಪ್ರೇರಣೆ ಒದಗಿಸಿದವು. ಸಂಪ್ರದಾಯ ಮನೋಭಾವ, ಮೂಢನಂಬಿಕೆ, ಜನಸಾಮಾನ್ಯರ ಶೋಷಣೆ ಮುಂತಾದವನ್ನು ನೆಲಸಮಮಾಡಿ, ಅಲ್ಲಿ ಹೊಸ ಸಮಾಜದ ನಿರ್ಮಾಣದ ಆಸೆ ಆಕಾಂಕ್ಷೆಗಳನ್ನು ಪೂರ್ಣಗೊಳಿಸುವ ದೃಷ್ಟಿಯಿಂದ ಮಾನವತಾವಾದದ ಮೇಲುಗೈ ಪಡೆಯಿತು. ಕನ್ನಡ ನಾಡಿನಲ್ಲಿ ಈ ಚಳುವಳಿಯ ಪ್ರಭಾವ ಕಥಾಸಾಹಿತ್ಯ, ನಾಟಕ ಸಿನಿಮಾಗಳಲ್ಲಿ ಕಾಣಿಸಿಕೊಂಡಿತು.

೧೯೪೩ ರಲ್ಲಿ ನವೆಂಬರ್‌ನಲ್ಲಿ ಕರ್ನಾಟಕ ಪ್ರಗತಿಶೀಲರ ಸಂಘ ಅ.ನ.ಕೃ ಅವರ ಮುಂದಾಳತ್ವದಲ್ಲಿ ಸ್ಥಾಪನೆಯಾಯಿತು. ೧೯೪೪ ರಲ್ಲಿ ಈ ಸಂಘ 'ಪ್ರಗತಿಶೀಲ ಸಾಹಿತ್ಯ', 'ಮ್ಯಾಕ್ಸಿಂಗಾರ್ಕಿ ಸಂಸ್ಮರಣ ಗ್ರಂಥ', 'ರಸಋಷಿ' ಗ್ರಂಥಗಳನ್ನು ಪ್ರಕಟಿಸಿತು. ಈ ಚಳುವಳಿ ಅ.ನ.ಕೃ ಅವರನ್ನು ಮತ್ತಷ್ಟು ಜನಪ್ರಿಯಗೊಳಿಸಿತು. ಅವರು ಈ ದಶಕದ ಪ್ರಮುಖವಾಣಿಯಾದರು. ಆದರೆ ಭಾರತೀಯ ಸಂಸ್ಕೃತಿಯ ಪುನರುತ್ಥಾನದ ಒತ್ತಾಸೆ ಹೆಚ್ಚಿದಂತೆ, ಗಾಂಧೀಜಿಯ ಪ್ರಭಾವಲಯ ವಿಸ್ತರಿಸಿದಂತೆ ಕರ್ನಾಟಕತ್ವದ ಕಲ್ಪನೆ ರೂಪತಳೆದಂತೆ ಪ್ರಗತಿಶೀಲ ಸಾಹಿತ್ಯದ ಚಳುವಳಿಯ ಕಾವು ಕ್ರಮೇಣ ಕಡಿಮೆಯಾಯಿತು.

ಅ.ನ.ಕೃ ಅವರ ಸೃಜನಶೀಲ ಕೃತಿಗಳಲ್ಲಿ ಕಂಡುಬರುವ ನೈತಿಕ ಉನ್ನತಿಯ ದೃಷ್ಟಿಕೋನ, ಅವರ ಬದುಕಿದ ರೀತಿಗೂ ಮತ್ತು ಬರಹಕ್ಕೂ ಬಿರುಕು ಕಾಣಿಸಿಕೊಂಡಿದ್ದರಿಂದ, ಪ್ರಗತಿಶೀಲ ಲೇಖಕರಲ್ಲಿ ಹಲವಾರು ಸಾಂಪ್ರದಾಯಿಕ ಶಿಕ್ಷಣವನ್ನು ನಾನಾ ಕಾರಣಗಳಿಂದ ಪಡೆದುಕೊಳ್ಳಲಾಗದೆ, ನವೋದಯ ಮತ್ತು ನವ್ಯ ಸಾಹಿತಿಗಳ ಉಪೇಕ್ಷಣೆ ಕಾರಣವಾದ್ದರಿಂದ, ಬಹುಪಾಲು ಪ್ರಗತಿಶೀಲ ಲೇಖಕರು ಸಂಪ್ರದಾಯವಾದಿಗಳ ಮೆಚ್ಚುಗೆಯ ವಲಯದಲ್ಲಿ ಬರಲಾಗದ್ದರಿಂದ ಅವರಲ್ಲೇ ಕಂಡುಬಂದ ಸ್ವಮೋಹ ಮತ್ತು ವಾಗ್ವಾದವೇ ದೊಡ್ಡದಾಗಿ ಬೆಳೆದು ಸೃಜನಶೀಲತೆಯ

ಕಲಾತ್ಮಕತೆಯನ್ನು ಕುಂಠಿತಗೊಳಿಸಿತು. ಒಟ್ಟಿನಲ್ಲಿ ಪ್ರಗತಿಶೀಲ ಸಾಹಿತ್ಯ ಚಳುವಳಿ ಜನಸಾಮಾನ್ಯರ ಬದುಕನ್ನು ಸಾಹಿತ್ಯ ವಲಯದಲ್ಲಿ ತಂದಿತು. ಭಾಷೆಯ ಬಿಗಿಯನ್ನು ಕಡಿಮೆಮಾಡಿ ಜನಸಾಮಾನ್ಯರ ಕಡೆಗೆ ಹೊರಳಿತು.

ಅ.ನ.ಕೃ ಮಣಿಪಾಲದಲ್ಲಿ ನಡೆದ ೪೨ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದರು. ೧೯೬೯ ರಲ್ಲಿ ಕನ್ನಡ ಸಾಹಿತ್ಯ ಅಕಾಡೆಮಿಯು ಪ್ರಶಸ್ತಿಯನ್ನು ನೀಡಿತು. ೧೯೭೦ ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಗೌರವ ಡಾಕ್ಟರೇಟ್ ಪದವಿಯನ್ನು ನೀಡಿ ಗೌರವಿಸಿತು. ಅದೇ ವರ್ಷ ಅ.ನ.ಕೃ ಅವರು ಕನ್ನಡ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ನೇಮಕಗೊಂಡರು. ಕೊನೆಯುಸಿರು ಇರುವವರೆಗೂ ನಾಡುನುಡಿಯ ಬಗ್ಗೆ ಮುಂಚೂಣಿಯ ಹೋರಾಟಗಾರರಾಗಿಯೇ ಇದ್ದರು. ಇವರು ೬೩ನೆಯ ವಯಸ್ಸಿನಲ್ಲಿ ೧೯೭೧ ಜುಲೈ ೮ ರಂದು ಬೆಂಗಳೂರಿನಲ್ಲಿ ನಿಧನರಾದರು. ಭಾರತೀಯ ಶಿಲ್ಪಶಾಸ್ತ್ರಗಳನ್ನು, ಹಾಗೂ ಚಿತ್ರಕಲೆಯ ಇತಿಹಾಸವನ್ನು ಕುರಿತು ಸಂಪುಟಗಳನ್ನು, ಕಾದಂಬರಿ ರೂಪದಲ್ಲಿ ರಾಮಾಯಣ–ಮಹಾಭಾರತ ಬರೆಯಬೇಕೆಂಬ ಹಂಬಲವನ್ನು ಹೊಂದಿದ್ದರು. ಆದ್ದರಿಂದ ಅವರ ನಿಜವಾದ ವ್ಯಕ್ತಿತ್ವವನ್ನು ಅರ್ಥಮಾಡಿಕೊಳ್ಳಲು ನಾಡಿನ ಸಾಂಸ್ಕೃತಿಯ ಚರಿತ್ರೆಯ ಹಿನ್ನಲೆಯಿಂದ ನೋಡಬೇಕು.

ಅ.ನ.ಕೃ ಅವರು ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ನವೀನ ಪ್ರಯೋಗಗಳನ್ನು ನಡೆಸಿದ್ದಾರೆ. ಇವರು ೧೯೦ಕ್ಕೂ ಹೆಚ್ಚಿನ ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ೧೧೯ ಕಾದಂಬರಿಗಳು, ೨೪ ನಾಟಕಗಳು, ೨೪ ವಿಮರ್ಶೆ ಹಾಗೂ ಪ್ರಬಂಧ ಸಂಕಲನಗಳು, ೧೧ ಕಥಾ ಸಂಕಲನಗಳು, ೯ ಜೀವನ ಚರಿತ್ರೆಗಳು ಹಾಗೂ ೪ ಅನುವಾದಗಳು. ಆದರೆ ಅವರಿಗೆ ಕೀರ್ತಿಯನ್ನು ತಂದುಕೊಟ್ಟಿದ್ದು ಕಾದಂಬರಿ ಮಾಧ್ಯಮ. ಇವರು ಒಂದರ ಮೇಲೊಂದು ಕಾದಂಬರಿಗಳನ್ನು ಬರೆಯುತ್ತಾ ಹೋದರು ಬರವಣಿಗೆಯನ್ನೇ ವೃತ್ತಿಯನ್ನಾಗಿ ಮಾಡಿಕೊಂಡರು. ಕೃತಿಗಳ ಸಂಖ್ಯೆಯ ದೃಷ್ಟಿಯಿಂದ, ಪ್ರಯೋಗಗಳ ದೃಷ್ಟಿಯಿಂದ, ವಸ್ತು ವೈವಿಧ್ಯದಿಂದ, ಮಾಂತ್ರಿಕ ಶೈಲಿಯ ಮೋಡಿಯಿಂದ ಬರಹಗಾರರ ಮೇಲೆ ಅಚ್ಚಳಿಯದ ಪ್ರಭಾವವನ್ನು ಬೀರಿದರು. ನಾಲ್ಕು ಮತ್ತು ಐದನೆಯ ದಶಕದಲ್ಲಿ ಕಾದಂಬರಿಯನ್ನು ಪ್ರಮುಖ ಅಭಿವ್ಯಕ್ತಿ ಪ್ರಕಾರವನ್ನಾಗಿ ರೂಪಿಸಿದರು. ಇವರ 'ಮಿಂಚು', 'ಅದೃಷ್ಯನಕ್ಷತ್ರ' ಮುಂತಾದ ಕಥಾ ಸಂಕಲನದಲ್ಲಿ ಹಾಗೂ ಕಾದಂಬರಿಗಳಲ್ಲಿ ಮುಖ್ಯವಾಗಿ ಮಾನವೀಯ ಧೋರಣೆಯನ್ನು, ಸಾಮಾನ್ಯನಿಗೆ ಬದುಕಿನಲ್ಲಿ ಘನತೆಯನ್ನು ತಂದುಕೊಡುವ ಪ್ರಯತ್ನ ಮಾಡಿದರು.

ಅ.ನ.ಕೃ ಬದುಕಿನ ನೂರಾರು ಸಾಧ್ಯತೆಗಳನ್ನು ಕಾದಂಬರಿಯ ಕಕ್ಷೆಯಲ್ಲಿ ತಂದರು. ಸಮಾಜಕ್ಕೂ, ವ್ಯಕ್ತಿಗೂ ಇರುವ ಸಂಬಂಧವನ್ನು ಬಲಪಡಿಸಿದರು. ಅವರ ಕಾದಂಬರಿಗಳಲ್ಲಿ ಕೇಳಿಸುವ ಒಳದನಿ ಎಂದರೆ ಕೌಟುಂಬಿಕ ಜೀವನದಲ್ಲಿ ಕಂಡುಬರುವ ಏರಿಳಿತಗಳು, ಮದುವೆ, ಲೈಂಗಿಕತೆ ವಿಷಯಗಳು, ಕಲಾವಿದರ ಪ್ರಪಂಚ, ಸಮಾಜದಲ್ಲಿ ಕಂಡುಬರುವ ವಿಕೃತಿಗಳನ್ನು ಅವರ ತಮ್ಮ ಕೃತಿಗಳಲ್ಲಿ ಅಡಕಗೊಳಿಸಿದ್ದಾರೆ. 'ಉದಯ ರಾಗ', 'ಸಂಧ್ಯಾರಾಗ', 'ಸಾಹಿತ್ಯರತ್ನ', 'ಕನ್ನಡಮ್ಮನ ಗುಡಿಯಲ್ಲಿ', 'ದೀಪಾರಾಧನೆ', 'ನಟಸಾರ್ವಭೌಮ', 'ಚಿತ್ರವಿಚಿತ್ರ', 'ಹೊನ್ನೆಮೊದಲು' ಕಾದಂಬರಿಗಳಲ್ಲಿ ಕಲಾವಿದರ ಜೀವನದ ಸೋಲು ಗೆಲುವುಗಳನ್ನು ತೆರೆದಿಟ್ಟಿದ್ದಾರೆ.

ಅ.ನ.ಕೃ ಅವರು ಸುಮಾರು ೬೦ ರ ದಶಕದಲ್ಲಿ ಬರೆದ ಕಾದಂಬರಿಗಳು ಬದಲಾಗುತ್ತಿರುವ ಸಮಾಜದ ಬಗ್ಗೆ ತೋರಿದ ಪ್ರತಿಕ್ರಿಯೆಗಳಾಗಿವೆ. ಹಳ್ಳಿಯ ಬದುಕು ಕುಟುಂಬದ ವಿಘಟನೆಯನ್ನು ಕುರಿತು ಚಿಂತಿಸಿದ್ದಾರೆ. 'ಗೃಹಲಕ್ಷ್ಮಿ', 'ರುಕ್ಮಿಣಿ', 'ತಾಯಿ-ಮಕ್ಕಳು', 'ಆಶೀರ್ವಾದ', 'ಅನುಗ್ರಹ', 'ಹೆಂಗರುಳು' ಕಾದಂಬರಿಗಳಲ್ಲಿ ಈ ನೆಲದ ಸಂಸ್ಕೃತಿಯ ವ್ಯಾಖ್ಯಾನವನ್ನು ಮಾಡುವುದರೊಂದಿಗೆ ತಮ್ಮ ಸಾಂಪ್ರದಾಯಿಕ ಮನಸ್ಸಿನ ಮನೋಧರ್ಮವನ್ನು ಪರಿವರ್ತನೆಯ ಸಮಾಜದಲ್ಲಿ ಹೆಣ್ಣು ಅನುಭವಿಸುವ ದುರಂತ ಚಿತ್ರವನ್ನು ಕೊಟ್ಟಿದ್ದಾರೆ.

ಅ.ನ.ಕೃ ಅವರ ಪ್ರಥಮ ಕಾದಂಬರಿ 'ಜೀವನ ಯಾತ್ರೆ' ಯಲ್ಲಿ ಗಂಡು ಹೆಣ್ಣಿನ ಸಂಬಂಧಗಳ ವಿಶ್ಲೇಷಣೆ ಯನ್ನು ನೋಡಬಹುದು. 'ಕಾಗದದ ಹೂ', 'ಸಂಜೆಗತ್ತಲು', 'ಶನಿಸಂತಾನ' ಕಾದಂಬರಿಗಳಲ್ಲಿ ವೇಶ್ಯಾ ಸಮಸ್ಯೆ ಮತ್ತು ಲೈಂಗಿಕ ಸಂಬಂಧವನ್ನು ಕುರಿತು ಬರೆದ ಕಾದಂಬರಿಗಳು ಅಂದಿನ ಸಾಹಿತ್ಯ ಲೋಕದಲ್ಲಿ ದೊಡ್ಡ ವಾಗ್ವಾದಕ್ಕೆ ಗುರಿಯಾಯಿತು. 'ಯಲಹಂಕ ಭೂಪಾಲ' ಮತ್ತು ಕಿತ್ತುರು ರಾಣಿ ಚೆನ್ನಮ್ಮ ಮತ್ತು ವಿಜಯನಗರ ಸಾಮ್ರಾಜ್ಯವನ್ನು ಕುರಿತು ಐತಿಹಾಸಿಕ ಕಾದಂಬರಿ ಮಾಲೆಯನ್ನು ರಚಿಸಿದ್ದಾರೆ. ಈ ಕಾದಂಬರಿಗಳ ಮುಖ್ಯ ಗುಣವೆಂದರೆ ಕರ್ನಾಟಕ ಚರಿತ್ರೆಯನ್ನು ಜನಪ್ರಿಯಗೊಳಿಸುವುದು, ಓದುಗರಲ್ಲಿ ನಾಡು-ನುಡಿಯ ಬಗ್ಗೆ ಅಭಿಮಾನ ಮೂಡುವಂತೆ ಮಾಡುವುದು.

ಅ.ನ.ಕೃ ಅವರು ಸಾಹಿತ್ಯ ಜೀವನವನ್ನು ಪ್ರಾರಂಭಿಸಿದ್ದೇ ನಾಟಕದಿಂದ. ಅಂದಿನ ನಾಟಕದ ರೀತಿ- ನೀತಿಗಳ ಬಗ್ಗೆ, ಪ್ರಯೋಗಗಳ ಬಗ್ಗೆ ಅನೇಕ ಲೇಖನಗಳನ್ನು 'ರಂಗಭೂಮಿ' ಯಲ್ಲಿ ಸುಧೀರ್ಘವಾಗಿ ಚರ್ಚಿಸಿದ್ದಾರೆ. 'ಆದದ್ದೇನು'?, 'ಗುಬ್ಬಚ್ಚಿಗೂಡು', 'ಧರ್ಮಸಂಕಟ', 'ವಿಶ್ವಧರ್ಮ', 'ಬಣ್ಣದಬೀಸಣಿಗೆ', ಮುಂತಾದ ನಾಟಕಗಳಲ್ಲಿ ಹಿಂದೂ-ಮುಸ್ಲಿಂ ಸಮಸ್ಯೆಯನ್ನು ಹಾಗೂ ಸ್ತ್ರೀ ಯರ ಬಗ್ಗೆ ಅವರಿಗಿರುವ ಕಳಕಳಿಯನ್ನು ಗುರುತಿಸಬಹುದು. ಪೌರಾಣಿಕ ನಾಟಕಗಳಾದ 'ಸ್ವರ್ಣಮೂರ್ತಿ',

'ಹಿರಣ್ಯಕಷಿಪು' ಪಾತ್ರ ಚಿತ್ರಣಗಳಲಿ ಹೊಸ ಬಗೆಯ ನಿಲುವುಗಳನ್ನು ಕಾಣ ಬಹುದು.'ಜೀವನ ನಾಟಕ', 'ಸ್ತ್ರೀ ರತ್ನ' ಚಿತ್ರಗಳಿಗೆ ಸಂಭಾಷಣೆಯನ್ನು ಬರೆದರು. ಆ ಪ್ರಪಂಚ ಅವರನ್ನು ಆಕರ್ಷಿಸಲಿಲ್ಲ. ಇವರ ಪ್ರಮುಖ ಕಾದಂಬರಿಯಾದ 'ಸಂಧ್ಯಾರಾಗ' ಚಲನಚಿತ್ರವಾಗಿ ಅಪಾರವಾದ ಜನರ ಮನ್ನಣೆಯನ್ನು ಗಳಿಸಿತು.

ಅ.ನ.ಕೃ ಕೇವಲ ಕಾದಂಬರಿ, ನಾಟಕಗಳಿಗೆ ಮಾತ್ರ ಸೀಮಿತವಾದ ಬರಹಗಾರಾಗಿರಲಿಲ್ಲ. ಅವರು ಜೀವನ ಚರಿತ್ರೆ, ವ್ಯಕ್ತಿ ಚಿತ್ರಗಳು, ವಿಮರ್ಶೆ, ಕಲಾವಿಮರ್ಶೆ, ಆತ್ಮಕಥನ ಮುಂತಾದವುಗಳನ್ನು ರಚಿಸಿದ್ದಾರೆ. ಅವರ ಗದ್ಯ ರಚನೆಯಲ್ಲಿ ಬಹುಕಾಲ ಉಳಿದುಕೊಳ್ಳುವುದು ಕಲಾವಿಮರ್ಶೆ. ಆದರೆ ಆ ಪರಂಪರೆ ಮುಂದುವರಿಯಲಿಲ್ಲ. ಅವರ 'ನನ್ನನ್ನ ನಾನೇ ಕಂಡೆ' ಮತ್ತು 'ಬರಹಗಾರನ ಬದುಕು' ಅವರ ಸಾಹಿತ್ಯದ ಮನೋಧರ್ಮವನ್ನು ಒಳಗೊಂಡಿದ್ದು ಸಾಹಿತ್ಯದ ನೆನಪುಗಳನ್ನು ದಾಖಲಿಸಿದ್ದಾರೆ. ಅವರು ಬಿಡಿಸಿದ 'ಕರ್ನಾಟಕದ ಕಲಾವಿದರು', 'ಕನ್ನಡ ಕುಲರಸಿಕರು' ಕನ್ನಡಕ್ಕೆ ಸಂದ ಅಪೂರ್ವ ಕೊಡುಗೆಗಳು.

ಹೀಗೆ ಅ.ನ.ಕೃ ತಮ್ಮ ಬದುಕು ಬರಹಗಳ ಮೂಲಕ ಕಂಡುಕೊಳ್ಳಲು ಪ್ರಯತ್ನಿಸಿದ್ದು ಕರ್ನಾಟಕ ಸಂಸ್ಕೃತಿಯ ಪುನರುತ್ಥಾನ. ಅಂದಿನ ಬದಲಾವಣೆಯ ಬಿರುಗಾಳಿಯಲ್ಲೂ ಕನ್ನಡತನ ಆರದಂತೆ ನೋಡಿಕೊಳ್ಳುವ ಪ್ರಯತ್ನದಲ್ಲಿ ಕನ್ನಡಿಗರಿಗೆ ಕನ್ನಡದ ಬಗ್ಗೆ ಅಭಿಮಾನ ಮೂಡಿಸುವ ಪ್ರಯತ್ನದಲ್ಲಿ ತಮ್ಮ ಇಡೀ ಪ್ರತಿಭೆಯನ್ನು, ಸಾಮರ್ಥ್ಯ ಶಕ್ತಿಗಳನ್ನು ಧಾರೆ ಎರೆದರು. ಜನಸಾಮಾನ್ಯ ಓದುಗರಿಗೆ ಸಾಹಿತ್ಯ ರಚನೆ ಮಾಡಿದರು. ಆದ್ದರಿಂದ ಇವರನ್ನು 'ಗೌರವದ ಸಂಕೇತ' ಎಂದೇ ಕರೆಯಲಾಗಿದೆ.

## ತ.ರಾ.ಸು ಅವರ ಜೀವನ ಮತ್ತು ಸಾಹಿತ್ಯ

ತಳುಕಿನ ರಾಮಸ್ವಾಮಯ್ಯ ಸುಬ್ಬರಾವ್ ಅವರು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ತ.ರಾ.ಸು ಎಂದೇ ಪರಿಚಿತರಾಗಿರುವವರು. ೧೯೨೦ ಏಪ್ರಿಲ್ ೨೧ ರಂದು ಚಿತ್ರದುರ್ಗ ಜಿಲ್ಲೆಯ ಹರಿಹರ ತಾಲ್ಲೂಕಿನ ಮಲೆಬೆನ್ನೂರಿನಲ್ಲಿ ಜನಿಸಿದರು. ತಂದೆ ರಾಮಸ್ವಾಮಯ್ಯ ತಾಯಿ ಸೀತಮ್ಮ.

'ಸಾಹಿತ್ಯ ಪ್ರೇಮ ನನ್ನ ಮನೆತನದ ಎಲ್ಲರಲ್ಲಿಯೂ ರಕ್ತಗತವಾಗಿ ಬಂದ ಗುಣ', ಎಂದು ತ.ರಾಸು ಅವರೇ ಹೇಳುತ್ತಾರೆ. ಮುತ್ತಾತ ವೆಂಕಣ್ಣಯ್ಯ, ತಾತ ಸುಬ್ಬಣ್ಣ, ತಂದೆ ರಾಮಸ್ವಾಮಯ್ಯ ಎಲ್ಲರೂ ಸಾಹಿತ್ಯಕ್ತಿಯುಳ್ಳವರೇ ಆಗಿದ್ದರು. ಆಧುನಿಕ ಕನ್ನಡ ಸಾಹಿತ್ಯದ ಅಶ್ವಿನಿ ದೇವತೆಗಳಾದ

ಪ್ರೊ.ಟಿ.ಎಸ್ ವೆಂಕಣ್ಣಯ್ಯ ತ.ರಾ.ಸು ಅವರ ದೊಡ್ಡಪ್ಪ. ವಿದ್ವಾಂಸರಾದ ತ.ಸು. ಶಾಮರಾಯರು ಚಿಕ್ಕಪ್ಪ. ಬಿ.ಸೀತಾರಾಮಶಾಸ್ತ್ರಿ. ಮಾವ ಹೀಗೆ ತ. ರಾ.ಸು ಸುಶಿಕ್ಷಿತ ಸುಸಂಸ್ಕೃತ ಮನೆತನದಲ್ಲಿ ಜನಿಸಿದರು.

ಚಿತ್ರದುರ್ಗಕ್ಕೆ ಆಗಮಿಸುವ ಸಾಹಿತಿಗಳು, ಸಂಗೀತಗಾರರು ಎಲ್ಲರನ್ನೂ ತಂದೆ ರಾಮಸ್ವಾಮಯ್ಯನವರು ಆಹ್ವಾನಿಸುತ್ತಿದ್ದರು. ಅವರೊಂದಿಗೆ ಸಾಹಿತ್ಯ ವಿಮರ್ಶೆಯನ್ನು ಮಾಡುವ ಸಹೃದಯತೆ ಅವರಿಗಿತ್ತು. ಹಾಗಾಗಿ ಮನೆಗೆ ಆಗಮಿಸಿದ ಪ್ರಸಿದ್ಧ ಲೇಖಕರಾದ ಬಿ.ಎಂ.ಶ್ರೀ, ಡಿ.ವಿ.ಜಿ, ಜಿ.ಪಿ.ರಾಜರತ್ನಂ, ದೇವುಡು, ನರಸಿಂಹ ಶಾಸ್ತ್ರಿ ಮೊದಲಾದವರ ಪರಿಚಯ ತ.ರಾ.ಸು ಅವರಿಗೆ ಬಾಲ್ಯದಿಂದಲೇ ಸಹಜವಾಗಿ ಒದಗಿ ಬಂದಿತು.

ವಿದ್ಯಾರ್ಥಿ ತ.ರಾ.ಸು ಅವರಿಗೆ ಶಾಲಾ ಪಠ್ಯ ಪುಸ್ತಕಗಳನ್ನು ಓದುವುದರಲ್ಲಿ ಅಷ್ಟೇನೂ ಆಸಕ್ತಿ ಇರಲಿಲ್ಲ. ಅವರ ಆಸಕ್ತಿಯೆಲ್ಲ ಪಠ್ಯೇತರ ಕೃತಿಗಳ ಬಗ್ಗೆ. ಕಥೆ, ಕವನ, ಕಾದಂಬರಿಗಳ ಓದು ಅವರಿಗೆ ತುಂಬಾ ಪ್ರಿಯ. ಇವರೊಳಗಿನ ಬರೆಯುವ ಶಕ್ತಿಯನ್ನು ಪತ್ತೆ ಹಚ್ಚಿ ಜಾಗೃತಗೊಳಿಸಿದ ಕೀರ್ತಿ ದೊಡ್ಡಪ್ಪ ಟಿ.ಎಸ್. ವೆಂಕಣ್ಣಯ್ಯನವರಿಗೆ ಸಲ್ಲುತ್ತದೆ. ಲೀಲಾಜಾಲವಾಗಿ ಮಾತನಾಡುವ ತ.ರಾ.ಸು ಅವರಿಗೆ ಒಂದು ಕಥೆ ಬರೆದು ತೋರಿಸು ಎಂದು ಹೇಳಿ, ಬರೆದರೆ ಹತ್ತು ರೂ ಕೊಡುತ್ತೇನೆ ಎಂದು ಆಸೆ ತೋರಿಸಿದರು. ಅದರ ಫಲ 'ಪುಟ್ಟನ ಚೆಂಡು' ಎಂಬ ಕಥೆಯನ್ನು ಸೃಷ್ಟಿಸಿದರು. ಸಾಹಿತ್ಯ ಕ್ಷೇತ್ರದಲ್ಲಿ ಬೇರು ಬಿಡಲು, ತಾನೂ ಬರೆಯಬಲ್ಲೆ ಎಂಬ ಆತ್ಮವಿಶ್ವಾಸ ಮೂಡಲು ಈ ಘಟನೆ ಕಾರಣವಾಯಿತು.

ತ.ರಾಸು ಅವರ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಚಿತ್ರದುರ್ಗದಲ್ಲಿ ಸಾಗಿತು. ಇವರು ಕನ್ನಡ, ಇಂಗ್ಲಿಷ್ ಹಾಗೂ ಇತಿಹಾಸ ವಿಷಯಗಳ ಮೇಲೆ ತುಂಬಾ ಆಸಕ್ತಿಯುಳ್ಳವರಾಗಿದ್ದರು. ಅಪಾರ ವಿಷಯ ಜ್ಞಾನದಿಂದಾಗಿ ಅಧ್ಯಾಪಕರ ಮೆಚ್ಚುಗೆಗೆ ತ.ರಾ.ಸು ಅವರು ಪಾತ್ರರಾಗಿದ್ದಾರು. ಹೋಯಿಸಳರಂತೂ ತ.ರಾ.ಸು ಅವರ ಸಾಹಿತ್ಯಾಭಿಲಾಷೆಯನ್ನು ಗುರುತಿಸಿ ಪ್ರೋತ್ಸಾಹ ನೀಡಿದರು. ಇದರ ಫಲವಾಗಿ ರವೀಂದ್ರನಾಥ ಠಾಗೂರರ 'ರೆಡ್ ಅಲೆಂಡಿಯಾರ್ಸ್' ನಾಟಕವನ್ನು 'ರಕ್ತ ಕಣಗಿಲೆ' ಎಂಬ ಹೆಸರಿನಲ್ಲಿ ಅನುವಾದಿಸಿದರು. 'ರಣಯಂತ್ರ' ಎಂಬ ಏಕಾಂಕ ನಾಟಕವನ್ನು ಬಾರಬ್ಬಾಸ್ ಎಂಬ ಕಥೆಯನ್ನು ಬೆಟಗೇರಿ ಕೃಷ್ಣಶರ್ಮರ ಸಂಪಾದಕತ್ವದಲ್ಲಿ ಬರುತ್ತಿದ್ದ 'ಜಯಂತಿ ' ಎಂಬ ಮಾಸ ಪತ್ರಿಕೆಯಲ್ಲಿ ಪ್ರಕಟವಾಯಿತು. ಈ ಹಿರಿಯರ ಸಂಪಾದಕತ್ವದ ಮಾಸ ಪತ್ರಿಕೆಗಳಲ್ಲಿ ಪ್ರಕಟವಾದ ಈ ಬರಹಗಳು ತ.ರಾ.ಸು ಅವರಿಗೆ ತುಂಬಾ ಆತ್ಮವಿಶ್ವಾಸವನ್ನು ಬೆಳೆಸಿದವು.

ಶಿವಮೊಗ್ಗದಲ್ಲಿ ಕಾಲೇಜು ವ್ಯಾಸಂಗ ಮಾಡುವಾಗ ಇಂಗ್ಲೀಷ್ ಸಾಹಿತ್ಯದ ಬಗ್ಗೆ ಎ.ಎನ್. ಮೂರ್ತಿರಾಯರು ಇತಿಹಾಸದ ಬಗ್ಗೆ ವೆಂಕಟದೇಶಿಚಾರ್ಯರು ತ.ರಾ.ಸು ಅವರ ಜ್ಞಾನ ಭಂಡಾರವನ್ನು ಮತ್ತಷ್ಟು ವಿಸ್ತರಿಸಿದರು. ತುಮಕೂರಿನಲ್ಲಿ ಸೀನಿಯರ್ ಇಂಟರ್ ಮೀಡಿಯಟ್ ವ್ಯಾಸಂಗವನ್ನು ಮಾಡುವಾಗ ಎಸ್. ವಿ. ಪರಮೇಶ್ವರ್ ಭಟ್ಟರು ಸಾಹಿತ್ಯಾಸಕ್ತಿಯ ಪ್ರವರ್ಧಮಾನಕ್ಕೆ ಕಾರಣರಾದರು. ಇವರು ಬಯಸುತ್ತಿದ್ದ ಮುಕ್ತ ವಾತಾವರಣ ಇಲ್ಲಿ ದೊರೆಯಿತು. ಅಂದರೆ ಹೋಟೆಲು ತಿಂಡಿ, ಸಿಗರೇಟು ಮೊದಲಾದ ಅಭ್ಯಾಸಗಳನ್ನು ಪೂರೈಸಿಕೊಳ್ಳಲು ಹೈಸ್ಕೂಲ್ ವಿದ್ಯಾರ್ಥಿಗಳಿಗೆ ಪ್ರಬಂಧವನ್ನು ಬರೆದುಕೊಟ್ಟು ಹಣಸಂಪಾದಿಸಿ ತಮ್ಮ ಚಟಗಳನ್ನು ತೃಪ್ತಿಪಡಿಸಲು ಹಿಡಿದ ಮಾರ್ಗವು ಕೂಡ ಇವರ ಬರವಣಿಗೆಯನ್ನು ಗಟ್ಟಿಗೊಳಿಸಿತು. ಇದೇ ಸಂದರ್ಭದಲ್ಲಿ ಸಾಹಿತ್ಯ ಪರಿಷತ್ತು ಏರ್ಪಡಿಸಿದ್ದ ಪ್ರಬಂಧ ಸ್ಪರ್ಧೆಯಲ್ಲಿ ಬಹುಮಾನ ಪಡೆದು ಹಿರಿಯರ ಸಾಹಿತಿಗಳ– ಸಾಹಿತ್ಯಾಸಕ್ತರ ಗಮನ ಸೆಳೆಯಿತು.

೧೯೪೨ ರ ಚಲೇಜಾವ್ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಜೈಲು ಸೇರುವುದರೊಂದಿಗೆ ಇವರ ವಿದ್ಯಾರ್ಥಿ ಜೀವನವು ಕೊನೆಗೊಂಡಿತು. ಬೆಂಗಳೂರಿಗೆ ಬಂದು ಪತ್ರಿಕಾವೃತ್ತಿಯನ್ನು ಆರಿಸಿಕೊಂಡರು. 'ವಿಶ್ವಕರ್ನಾಟಕ' ಪತ್ರಿಕೆಯ ಕಛೇರಿಯನ್ನು ಸೇರಿದ್ದರು. ಅದು ಸ್ವಾತಂತ್ರ್ಯದ ಹೋರಾಟದಲ್ಲಿ ತಮ್ಮ ಆಸ್ತಿಯನ್ನಲ್ಲ ಕಳೆದುಕೊಡು ಆದರ್ಶತ್ವದ ಬೆನ್ನುಹತ್ತಿ ಧೀರ ಜೀವನ ನಡೆಸುತ್ತಿದ್ದ ತಿರುಮಲೆ ತಾತಾಚಾರ್ಯ ಶರ್ಮರ ಪತ್ರಿಕೆ. ಅವರ ಜೊತೆಗೆ ನಡೆಸುತ್ತಿದ್ದ ಧೀರಜೀವ ಸಿದ್ದವನಳ್ಳಿ ಕೃಷ್ಣಶರ್ಮ ಇಬ್ಬರದೂ ಶಕ್ತಿಯುತವಾದ ತೇಜಸ್ವಿ ಕಲೆ. ತ.ರಾ.ಸು ಅವರು ಕೃಷ್ಣಶರ್ಮರಿಗೆ ಹತ್ತಿರವಾದರೂ ಅವರ ಧ್ಯೇಯಗಳನ್ನು, ಜೀವನ ರೀತಿಯನ್ನು ಬರಹವನ್ನು ಮೆಚ್ಚಿಕೊಂಡರು. ಅವರಂತೇಯೇ ಬರಹವನ್ನೇ ವೃತ್ತಿಯನ್ನಾಗಿ ಮಾಡಿಕೊಂಡರು. ಪತ್ರಿಕೋದ್ಯಮಿಯಾಗಿ ಆದರ್ಶತ್ವವನ್ನು ಬೆಳೆಸಿಕೊಂಡರು.

ತ.ರಾ.ಸು ಅವರು ಬೆಂಗಳೂರಿಗೆ ಬಂದು ವಿಶ್ವಕರ್ನಾಟಕ ಸೇರಿದ ದಿನಗಳಲ್ಲಿ ಅ.ನ.ಕೃ ಪ್ರಗತಿಶೀಲ ಪಂಥವನ್ನು ನಿರ್ಮಿಸುತ್ತಿದ್ದರು. ೧೯೩೬ ರ ಏಪ್ರಿಲ್ ೧೦ ರಂದು ಲಕ್ನೋದಲ್ಲಿ ಅಖಿಲಭಾರತ ಪ್ರಗತಿಶೀಲ ಲೇಖಕರ ಪ್ರಥಮ ಸಮ್ಮೇಳನ ಪ್ರೇಮಚಂದರ ಅಧ್ಯಕ್ಷತೆಯಲ್ಲಿ ನಡೆಯಿತು. ಕರ್ನಾಟಕದಲ್ಲಿ ಪ್ರಗತಿಶೀಲ ಚಳುವಳಿಯ ನೇತಾರರಾದವರು ಅ.ನ.ಕೃ ಅವರು. ಅ.ನ.ಕೃ ರವರ ಮಾತುಗಳಲ್ಲೇ ಪ್ರಗತಿಶೀಲಾ ಪಂಥದ ದೃಷ್ಟಿಯನ್ನು ಹೇಳುವುದಾದರೆ 'ಸಾಹಿತ್ಯವೆಂಬ ಮಡಿಕೋಟೆಯನ್ನು ಕಟ್ಟಿಕೊಂಡು ಸುತ್ತಮುತ್ತಲಿನ ಜಗತ್ತಿನ ಹಾಹಾಕಾರದ ಮೇಲೆ ಅವಕುಂಡನ ಹಾಕಿ ತನ್ನ ಭಾವ ಪ್ರಪಂಚದಲ್ಲಿ ಮೈಮರೆಯುವ ಸಾಹಿತಿ ತನ್ನ ಅಥವಾ ದೇಶದ ಹಿತವನ್ನು ಸಾಧಿಸಲಾರ'.

ನವೋದಯ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಪದದೊಂದಿಗೆ ಪೂರ್ಣಬೆರೆಯುವ ಮನೋಭಾವನೆ ಇರಲಿಲ್ಲ. ಆದ್ದರಿಂದಲೇ ಅತೃಪ್ತಿ ಹುಟ್ಟಿತು. ಸಾಹಿತಿಯ ಕ್ರಾಂತಿ ಖಡ್ಗಕ್ಕೆ ಲೋಕದ ತಾಮಸ ಕಳೆಗಳು ನಡುಗಬೇಕು. ಅದು ದುರ್ಬಲರ, ದಲಿತರ, ಬಡವರ ರಕ್ಷಾ ಕವಚವಾಗಬೇಕು. [ಧಾರವಾಡ ಜಿಲ್ಲೆಯ ೬ ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣ ೧೯೪೬].

ಅ.ನ.ಕೃ ಅವರು ತ.ರಾ.ಸು ಅವರ ಮೇಲೆ ಗಾಢವಾದ ಪ್ರಭಾವ ಬೀರಿದರು. ತರುಣ ಸಾಹಿತಿಗಳಿಗೆ ಪ್ರೋತ್ಸಾಹ ಕೊಡುವುದರಲ್ಲಿ ಸಂತೋಷವನ್ನು ಕಾಣುತ್ತಿದ್ದ ಅ.ನ.ಕೃ ಈ ತರುಣ ಪ್ರತಿಭೆಯನ್ನು ಮೆಚ್ಚಿಕೊಂಡರು. ತ.ರಾ.ಸು ಅವರು ಅ.ನ.ಕೃ ಅವರಲ್ಲಿ ಗಾಢವಾದ ಗೌರವನ್ನು ಬೆಳೆಸಿಕೊಂಡರು. ಪ್ರಗತಿಶೀಲ ಪಂಥದ ದೃಷ್ಠಿ ಆದರ್ಶಗಳು ಅವರಿಗೆ ಮೆಚ್ಚುಗೆಯಾದವು. ಆ ಚಳುವಳಿಯಲ್ಲಿ ಇವರೂ ಸಹ ಒಬ್ಬರಾದರು. ೧೯೪೬ರಲ್ಲಿ ತ.ರಾ.ಸು ಅವರ ಮೊದಲನೆಯ ಕಥಾ ಸಂಕಲನ 'ರೂಪಸಿ' ಪ್ರಕಟವಾಯಿತು. ಇದೇ ವರ್ಷದಲ್ಲಿ ಪ್ರಕಟವಾದ 'ಮನೆಗೆ ಬಂದ ಮಹಾಲಕ್ಷ್ಮಿ' ತೀವ್ರವಾದ ವಿವಾದಕ್ಕೆ ಒಳಗಾಯಿತು. ಎರಡರಲ್ಲಿಯೂ ಚಿತ್ರಮಯವಾದ, ಭಾವಪೂರ್ಣವಾದ, ಶಕ್ತವಾದ ಗದ್ಯದ ಪ್ರಭುವೊಬ್ಬರ ಪ್ರತಿಭೆ ಸ್ಪಷ್ಟವಾಗಿ ಕಾಣುತ್ತದೆ. 'ರೂಪಸಿ' ಸಂಗ್ರಹದಲ್ಲಿ ಪ್ರಗತಿಶೀಲ ಸಂಘಕ್ಕೆ ವಿಶಿಷ್ಟವಾದ ಅಂಶ ಯಾವುದೂ ಇಲ್ಲ.

ಇಲ್ಲಿಂದ ಮುಂದೆ ಮೂವತ್ತಾರು ವರ್ಷಗಳ ಕಾಲ ತ.ರಾ.ಸು ಅವರು ಸಾಹಿತ್ಯ ರಚನೆ ಮಾಡಿದರು. ಅತ್ಯಂತ ಜನಪ್ರಿಯ ಬರಹಗಾರರಲ್ಲಿ ಒಬ್ಬರಾದವರು. ತ.ರಾ.ಸು. ಅವರ ೫೩ ಸಾಮಾಜಿಕ ಕಾದಂಬರಿಗಳು, ೧೨ ಐತಿಹಾಸಿಕ ಕಾದಂಬರಿಗಳು, ೨ ಪೌರಾಣಿಕ ಕಾದಂಬರಿಗಳು, ೨೧ ಕಥಾಸಂಕಲನಗಳು, ೬ ಅನುವಾದಗಳು, ೪ ಜೀವನ ಚರಿತ್ರೆಗಳು, ೨ ಆತ್ಮಕಥನಗಳು ಹೀಗೆ ಇವರು ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಒಟ್ಟು ಇವರ ಹೆಸರನ್ನು ಹೊತ್ತ ಕೃತಿಗಳು ತೊಂಬತ್ತಾರು. ಈ ಸಂಖ್ಯೆಯಲ್ಲಿ ಅವರು ಸಂಪಾದಕರಾಗಿ ಕೆಲಸ ಮಾಡಿದ ಕೃತಿಗಳು ಇವೆ. ಅವರ ಅನೇಕ ಕಾದಂಬರಿಗಳು ಚಲನಚಿತ್ರಗಳಾಗಿ ಲಕ್ಷಾಂತರ ಮಂದಿ ಪ್ರೇಕ್ಷಕರ ಮೆಚ್ಚುಗೆಯನ್ನು ಗಳಿಸಿದವು. 'ಹಂಸಗೀತೆ' ಯು ಹಿಂದಿಯಲ್ಲಿ 'ಬಸಂತ್ ಬಹಾರ್' ಆಗಿ ಅಖಿಲ ಭಾರತ ಮಟ್ಟದಲ್ಲಿ ಮೆಚ್ಚುಗೆಯನ್ನು ಗಳಿಸಿತು. ಇವರ 'ದುರ್ಗಾಸ್ತಮಾನ' ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಸಂದಿತು.

ಸುಮಾರು ಹದಿನೆಂಟು ವರ್ಷಗಳಲ್ಲಿ ತ.ರಾ.ಸು ಅವರು ಇಪ್ಪತ್ತೊಂದು ಕಥೆಗಳನ್ನು ಬರೆದರು. ಅವರ ಮೊದಲನೆಯ ಕಥಾಸಂಕಲನ 'ರೂಪಸಿ' ಯಲ್ಲಿ ಕಾಣುವುದು ಚಿತ್ರಮಯವಾದ, ಭಾವ ರಂಜಿತವಾದ ಗದ್ಯ ಶೈಲಿ. ಚಿಂತನೆಯ ಪ್ರಗತಿಶೀಲ ಪಂಥದ ಧೋರಣೆ

ಪ್ರತಿಬಿಂಬಿತವಾಗುವುದು 'ತೊಟ್ಟಿಲು ತೂಗಿತು' ಸಂಗ್ರಹದ ಕಥೆಯಲ್ಲಿ. ಕಥೆಗಾರನಾಗಿ ತ.ರಾ.ಸು. ಅವರ ಪ್ರತಿಭೆ ಮಿಂಚುವುದು 'ಗಿರಿಮಲ್ಲಿಗೆಯ ನಂದನದಲ್ಲಿ' ಸಂಗ್ರಹದಲ್ಲಿ ಕಾಣಬಹುದು. ಹೀಗೆ ಇವರು 'ಇದೇ ನಿಜವಾದ ಸಂಪತ್ತು', 'ಕುಂಟುಕಾಲಿನ ಕತ್ತೆ' ಮತ್ತು 'ಎಲ್ಲಿದ್ದ ಇವನು'? ಕಥೆಗಳನ್ನು ಬರೆದಿದ್ದಾರೆ.

ತ.ರಾ.ಸು. ಅವರ ಕಾದಂಬರಿಗಳನ್ನು ಮೂರು ವರ್ಗಗಳಾಗಿ ವಿಂಗಡಿಸಬಹುದು. ಮೊದಲನೆಯದು ಪ್ರಗತಿಶೀಲ ಪಂಥದ ಉತ್ಸಾಹೀ ಅತಿರತವಾಗಿ ಬರೆದ ಕಾದಂಬರಿಗಳು. 'ಕೇದಿಗೆಮನೆ', 'ಜೀತದಜೀವ', 'ಪುರುಷಾವತಾರ', 'ಬೆಂಕಿಯಬಲೆ', 'ಬಿಡುಗಡೆಯಬೇಡಿ' 'ಮುಂಜಾವಿನಿಂದ ಮುಂಜಾವು', 'ರಕ್ತತರ್ಪಣ' – ಇವೆಲ್ಲ ಈ ವರ್ಗದ ಕೃತಿಗಳು ಎರಡನೆಯದು ಐತಿಹಾಸಿಕ ಕಾದಂಬರಿಗಳು. ಕೆಲವು ಚಿತ್ರದುರ್ಗದ ಇತಿಹಾಕ್ಕೆ ಪುನರ್ಜೀವ ಕೊಡುತ್ತದೆ. 'ಕಂಬನಿಯ ಕುಯಿಲು', 'ರಕ್ತ ರಾತ್ರಿ', 'ತಿರುಗುಬಾಣ', 'ಮೃತ್ಯು ಸಿಂಹಾಸನ', ದುರ್ಗಾಸ್ತ ಮಾನ ಎಲ್ಲಾ ಚಿತ್ರರ್ದುದ ಉಜ್ವಲ ಚರಿತ್ರೆಗೆ ಮುಡಿಪಾಗಿವೆ. ಇವಲ್ಲದೆ 'ನೃಪತುಂಗ', 'ವಿಜಯೋತ್ಸವ', 'ಶಿಲ್ಪಶ್ರೀ', 'ಸಿಡಿಲ ಮೊಗ್ಗು', 'ಕೀರ್ತಿನಾರಾಯಣ' ಇಂತಹ ಚಾರಿತ್ರಿಕ ಕಾದಂಬರಿಗಳನ್ನು ಬರೆದರು. ಮೂರನೆಯದು ಇತರ ಕಾದಂಬರಿಗಳು ಸಾಮಾಜಿಕ ಮತ್ತು ಐತಿಹಾಸಿಕ ಕಾದಂಬರಿಗಳ ಗುಂಪಿಗೆ ಸೇರುತ್ತವೆ. 'ನಾಗರಹಾವು', 'ಚಂದನದಗೊಂಬೆ', 'ಚಂದವಳ್ಳಿಯ ತೋಟ', 'ಚಕ್ರ ತೀರ್ಥ' ಇಂತಹವು ಸಾಮಾಜಿಕ ಕಾದಂಬರಿಗಳಲ್ಲಿ 'ಹಂಸಗೀತೆ' ಯನ್ನು ಐತಿಹಾಸಿಕ ಕಾದಂಬರಿ ಎಂದು ಕೆಲವೊಮ್ಮೆ ವರ್ಣಿಸಿರುವುದು ನಿಜ. ಆದರೆ ಇದು ಐತಿಹಾಸಿಕ ಕಾದಂಬರಿಯ ಗುಂಪಿಗೆ ಸೇರುವುದಿಲ್ಲ. ಈ ವರ್ಗದ ಕಾದಂಬರಿಗಳಲ್ಲಿ ವ್ಯಕ್ತಿ ವ್ಯಕ್ತಿಗಳ ಸಂಬಂಧ ವ್ಯಕ್ತಿತ್ವ ರೂಪುಗೊಳ್ಳುವುದು. ಈ ಕಾದಂಬರಿಗಳ ಮುಖ್ಯ ಆಸಕ್ತಿ.

ಹೀಗೆ ಅಪಾರವಾದ ಜೀವನಾನುಭವ, ಆಳವಾದ ಅಧ್ಯಯನದಿಂದಾಗಿ ಕಾದಂಬರಿ ರಚನೆಗೆ ತೊಡಗಿದ ತ.ರಾ.ಸು ಅವರು ಜೀವನದ ಕೊನೆಯ ತನಕವೂ ಬರೆದರು. ಹಲವಾರು ಪ್ರಶಸ್ತಿಗಳಿಗೂ ಭಾಜನರಾದರು. ಶ್ರೇಷ್ಠ ಕಾದಂಬರಿಕಾರ ಎಂದು ಕನ್ನಡ ಸಾಹಿತ್ಯ ಪರಿಷತ್ತು ೧೯೭೦ ಡಿಸೆಂಬರ್ ೨೬ರಂದು ಗೌರವವನ್ನು ಸಲ್ಲಿಸಿತು. 'ದುರ್ಗಾಸ್ತಮಾನ' ಕಾದಂಬರಿಗೆ ೧೯೮೪ ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ವಿಶೇಷ ಪುರಸ್ಕಾರ ಲಭಿಸಿತು. ೧೯೮೫ರಲ್ಲಿ ಮರಣೋತ್ತರ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಇತ್ಯಾದಿ ಪ್ರಶಸ್ತಿಗಳು ಇವರಿಗೆ ಲಭಿಸಿತು. ತ.ರಾಸು. ಅವರ ಬದುಕು ಬರಹ (ಅಭಿನಂದನ ಗ್ರಂಥ) 'ಗಿರಿ ಮಲ್ಲಿಗೆ' (ಸಂಸ್ಮರಣ ಗ್ರಂಥ) ಕೃತಿಗಳು ತ.ರಾ.ಸು ಅವರ ಸಾಹಿತ್ಯ ಸಾಧನೆಯನ್ನು ಒಪ್ಪಿಸುವ ಮೈಲಿಗಲ್ಲುಗಳಾಗಿವೆ.

ಹೀಗೆ ತ.ರಾ.ಸು ಅವರ ಇಟ್ಟ ಹೆಜ್ಜೆ ಪಟ್ಟ ಶ್ರಮ ಅವರ ಬರಹದ ಬೆಂಗಾವಲಾಗಿಯೇ ಬಂದವು. ನಿರಂತರ ಅಧ್ಯಯನ, ಚಿಂತನ-ಮಂಥನ, ಪಡೆದುಕೊಂಡ ಅಪಾರವಾದ ಜೀವನಾನುಭವ, ಬದುಕಿನ ಅನಿವಾರ್ಯತೆ, ಬರೆಯಬೇಕೆಂಬ ತುಡಿತ-ಮಿಡಿತಗಳು ತ.ರಾ.ಸು ಅವರನ್ನು ಉತ್ತಮ ಲೇಖಕರನ್ನಾಗಿ ರೂಪಿಸಿದವು. ಪದ್ಯದ ಲಯ, ಗದ್ಯದ ಹದ, ಭಾವಗಳ ನವುರಾದ ಅಭಿವ್ಯಕ್ತಿ ಸಾಧ್ಯತೆಗಳಿಂದ ಕಾದಂಬರಿ ಕ್ಷೇತ್ರದಲ್ಲಿ ಹೊಸ ಹೊಸ ಛಾಪು ಮೂಡಿಸುವಲ್ಲಿ ಯಶಸ್ವಿಯಾದರು.

---

**ಅಡಿ ಟಿಪ್ಪಣಿ**

೧. ಡಾ.ಹು.ರಾ. ಕೋಮಲವಲ್ಲಿ ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳು ಒಂದು ಅಧ್ಯಯನ. (ಪು.ಸಂ ೧)

೨. ಸಾಲುದೀಪಗಳು ಸಂ.ಡಾ.ಜಿ.ಎಸ್.ಶಿವರುದ್ರಪ್ಪ (ಪು.ಸಂ.೨೮೬)

# ಅಧ್ಯಾಯ-೨

## ಕಾದಂಬರಿಗಳ ಕಥಾವಸ್ತು

### ಸಂಧ್ಯಾರಾಗ ಕಾದಂಬರಿಯ ಕಥಾವಸ್ತು:-

ಸಂವೇದನಾಶೀಲನಾದ ಸಾಹಿತಿ ತತ್ಕಾಲದ ಸಾಮಾಜಿಕ ಆಶೋತ್ತರಗಳಿಗೆ ಸ್ಪಂದಿಸುತ್ತಾನೆ. ಸಮಸ್ಯೆಗಳನ್ನು ಸೂಕ್ಷ್ಮ ಗ್ರಹಿಕೆಯಿಂದ ವಿಶ್ಲೇಷಿಸುತ್ತಾನೆ. ತನ್ನ ಸುತ್ತಲ ಸಮಾಜದ ಬದುಕಿನ ಹಲವು ಮಜಲುಗಳು ಕೃತಿಯಲ್ಲಿ ಅನಾವರಣಗೊಳ್ಳುತ್ತವೆ. ಈ ನಿಟ್ಟಿನಲ್ಲಿ ಅ.ನ.ಕೃ ಅವರ ಕಾದಂಬರಿಗಳ ವಸ್ತು ನಿಷ್ಠೆ ಅವಲೋಕನೆಯಲ್ಲಿ ಕೃತಿ ಪಡೆದುಕೊಳ್ಳುವ ಮೌಲ್ಯ ಅತ್ಯಂತ ಗಮನಾರ್ಹವಾದುದು.

ಸಾಮಾಜಿಕ ಪರಿಸರದಲ್ಲಿ ಉದ್ಭವಿಸುವ ಸಮಸ್ಯೆಗಳು ಬಹುಮುಖಿಯಾದವು. ಹಸಿವು, ಬಡತನ, ಕಾಮ-ಪ್ರೇಮ ಇತ್ಯಾದಿ, ಇವುಗಳ ಹಿಂದೆ ಮನುಷ್ಯ ಸಹಜ ರಾಗ-ಭಾವಗಳ ತಾಕಲಾಟಗಳು, ಸ್ನೇಹ-ಸಜ್ಜನಿಕೆ, ಅನುಕಂಪ-ಕ್ರೌರ್ಯ, ದ್ವೇಷ ದಬ್ಬಾಳಿಗಳ ಚಿತ್ರಣ ಅನಾವರಣಗೊಳ್ಳುತ್ತವೆ. ಸಾಮಾಜಿಕ ಆಯಾಮದಲ್ಲಿ ರೂಪುಗೊಂಡ ಸಂಕೀರ್ಣ ಸಮಸ್ಯೆಗಳನ್ನು ವಾಸ್ತವಿಕ ನೆಲಗಟ್ಟಿನಲ್ಲಿ ನಿರೂಪಿಸುವ ಆಶಯ ಕೃತಿಯಲ್ಲಿ ಮೈದಾಳುತ್ತದೆ. ಈ ದೃಷ್ಟಿಕೋನದಿಂದ ಅ.ನ.ಕೃ ಅವರು ಸಮಕಾಲೀನ ಲೇಖಕರಿಗಿಂತ ವಿಶಿಷ್ಟರೆನಿಸುತ್ತಾರೆ.

**೧೯೪೦**ರಲ್ಲಿ 'ಜೀವನಯಾತ್ರೆ' ಬರೆದ ಅ.ನ.ಕೃ 'ಸಂಧ್ಯಾರಾಗವನ್ನು' **೧೯೪೧** ರಲ್ಲಿ ಬರೆದರು. ಹದಿನೈದು ದಿವಸಗಳಲ್ಲಿ ಸಂಗೀತಗಾರನೊಬ್ಬನ ಬದುಕನ್ನು ಕುರಿತು ಈ ಕಾದಂಬರಿ ಅ.ನ.ಕೃ ಅವರು ಬರೆದ ಕಾದಂಬರಿಗಳಲ್ಲಿ ಅತ್ಯಂತ ಜನಪ್ರಿಯವಾದುದು. ಈ ಕಾದಂಬರಿಯ ಕಥೆ ಪ್ರಾರಂಭವಾಗುವುದು ಗ್ರಾಮೀಣ ಸಂಸ್ಕೃತಿ ಇನ್ನೂ ಜೀವಂತವಾಗಿದ್ದ ಹೊಸಳ್ಳಿಯಿಂದ. ಮುಂದೆ ಕಥೆ ಸ್ಥಾನಾಂತರಗೊಳ್ಳುವುದು ಬೆಂಗಳೂರಿನಂತಹ ಪಟ್ಟಣದ ಸಂಸ್ಕೃತಿಗೆ.

ಸಂಧ್ಯಾರಾಗ ಅಣ್ಣ-ತಮ್ಮಂದಿರ ಕಥೆ. ಅಣ್ಣ ರಾಮಚಂದ್ರ ತಮ್ಮ ಲಕ್ಷ್ಮಣ. ಅಣ್ಣನು ರೂಢಿ ಶಿಕ್ಷಣ ಪಡೆದು ವಕೀಲನಾಗಿ ತನ್ನ ಬುದ್ಧಿವಂತಿಕೆಯಿಂದ ಮೇಲೆ ಬಂದು ಮುಂದುವರಿದು ನ್ಯಾಯಾಧೀಶನಾಗುತ್ತಾನೆ. ಕಡೆಗೆ ಸ್ವಾರ್ಥ, ದುರಾಸೆಗೆ ಬಲಿಯಾಗಿ ಮನೆಯ ನೆಮ್ಮದಿಯನ್ನು ಹಾಳು ಮಾಡಿದ್ದಲ್ಲದೇ ತಾನೂ ಕಷ್ಟಕ್ಕೆ ಒಳಗಾಗುತ್ತಾನೆ. ಆದರೆ ಲಕ್ಷ್ಮಣ ರೂಢಿ ಶಿಕ್ಷಣ ಪಡೆಯದೇ ಸಂಗೀತ ಶಿಕ್ಷಣವನ್ನು ಆರಿಸಿಕೊಳ್ಳುತ್ತಾನೆ. ಅಣ್ಣ ರಾಮಚಂದ್ರ ಲಕ್ಷ್ಮಣನನ್ನು ಮನೆಯಿಂದ ಹೊರಹಾಕುತ್ತಾನೆ.

ಕಡೆಗೆ ಒಂದು ದಿನ ರಾಮಚಂದ್ರ ಹುಚ್ಚನಾಗುತ್ತಾನೆ. ಮನೆಯಿಂದ ಹೊರಬಿದ್ದ ಲಕ್ಷ್ಮಣನಿಗೆ ಗುರುಗಳೊಬ್ಬರು ಸಿಗುತ್ತಾರೆ. ಸಂಗೀತ ಅಭ್ಯಾಸ ಮಾಡಿ ಉತ್ತಮ ಸಂಗೀತಗಾರನಾಗಿ ಸಮಾಜದ ಮನ್ನಣೆ ಪಡೆದು ಜಗತ್ತಿನ ಲೌಕಿಕ ಬಯಕೆಗಳಿಗೆ ಬಲಿಯಾಗದೇ ದೊಡ್ಡ ವ್ಯಕ್ತಿಯಾಗುತ್ತಾನೆ.

ಗೌರಮ್ಮ ಶ್ರೀನಿವಾಸರಾಯರು, ಮೀನಾಕ್ಷಮ್ಮ, ಸಾವಿತ್ರಿ, ಶಾಮಣ್ಣ ಗ್ರಾಮೀಣ ಬದುಕಿನ ಮೌಲ್ಯಗಳಾದ ಸತ್ಯ, ಧರ್ಮ, ನ್ಯಾಯ, ಔದಾರ್ಯ, ಮಾನವೀಯತೆಗಳನ್ನು ಎತ್ತಿ ಹಿಡಿಯುವವರು. ಸುಸಂಸ್ಕೃತ ಬದುಕಿನ ಆದರ್ಶಗಳನ್ನು ನಾವು ಇವರಲ್ಲಿ ಕಾಣಬಹುದು. ರಾಯರು [ಶ್ರೀನಿವಾಸರಾಯರು] ಪ್ರಾಮಾಣಿಕರು, ಬಾಯಿಮಾತಿನ ಮೇಲೆ ಸಾವಿರಾರು ರೂಪಾಯಿಗಳ ಸಾಲ ಕೊಟ್ಟವರು ಮನುಷ್ಯ ಸಂಬಂಧಗಳಲ್ಲಿ ನಂಬಿಕೆಯಿಟ್ಟಿದ್ದವರು. ಲಘುವಾಗಿ ಮಾತನಾಡಿದ ಎನ್ನುವ ಕಾರಣಕ್ಕೆ ಕೆಂಪೇಗೌಡನ ಎರಡು ಸಾವಿರ ರೂಪಾಯಿಯ ಪತ್ರವನ್ನು ಚಿಂದಿ ಚಿಂದಿಯಾಗಿ ಹರಿದು ಅವನ ತಲೆಯ ಮೇಲೆ ಹಾಕಿ ಕಳುಹಿಸಿದರು. ದೊಡ್ಡ ಬರ ಬಂದಾಗ ಹೊಸಹಳ್ಳಿಯ ಜನ ಕಂಗಾಲಾದ ಸಂದರ್ಭದಲ್ಲಿ ಪಟೇಲ, ಗೌಡರು ಒಂದಾಗಿ ಹಳ್ಳಿಯ ಜನರು ಇದ್ದುದ್ದನ್ನೆಲ್ಲಾ ಮಾರಲು ಹೊರಟಾಗ ಅದರ ಲಾಭವನ್ನು ಪಡೆದುಕೊಳ್ಳಲು ಹೊರಟರು. ಈ ಅನ್ಯಾಯ ನೋಡಿ ನೋಡಿ ರಾಯರಿಗೂ ಸಾಕಾಗಿ ಹೋಯಿತು. ಪಟೇಲ ಗೌಡರನ್ನು ಕರೆಯಿಸಿ ಬುದ್ಧಿ ಹೇಳಿದರು. ಊರಿನ ಮರ್ಯಾದೆ ಕಡೆ ಲಕ್ಷ್ಯ ಇಡಿ ಈ ರಕ್ತ ಕಾಣಿಕೆಯಿಂದ ನಿಮ್ಮ ಮನೆ ಊರ್ಜಿತವಾಗುವುದಿಲ್ಲ, ಜನ ಬಹಳ ಕೆಟ್ಟು ಹೋಗ್ತಾರೆ, ಊರು ಹಾಳಾಗಿ ಹೋಗುತ್ತೆ ಎಂದು ಬುದ್ಧಿ ಹೇಳಿದರು. ರಾಯರು ಯೋಚನೆ ಮಾಡಿ ತಮ್ಮ ಹತ್ತಿರ ಇದ್ದ ೨೦-೩೦ ಖಂಡುಗ ದವಸ ಧಾನ್ಯವನ್ನು ಮಾರನೆಯ ದಿವಸ ಊರಿನವರನ್ನೆಲ್ಲಾ ಕರೆದು ಮನೆಗೆ ಇಷ್ಟು ಎಂದು ಅಳೆದು ಬಿಟ್ಟರು. ಅಂದಿನಿಂದ ರಾಯರು ಎಂದರೆ ಊರಿನ ದೇವರು. ಅವರ ಮಾತು ವೇದ ವಾಕ್ಯ.

ರಾಯರ ಔದಾರ್ಯ ಎಷ್ಟು ದೊಡ್ಡದೆಂದರೆ ದೇವರ ಹತ್ತಿರ ಯಾಚನೆಗೆ ಹೋದರೆ ಅವರಾದರೂ ಒಂದೊಂದು ಸಲ ಏನೂ ಕೊಡದೆ ಹಿಂದಕ್ಕೆ ಅಟ್ಟಬಹುದು. ರಾಯರ ಹತ್ತಿರ ಹೋದರೆ ಯಾರು ಬರಿಗೈಯಲ್ಲಿ ಬರುವ ಹಾಗಿಲ್ಲ ಎಂದು ಜನ ಧಾರಾಳವಾಗಿ ಅಂದುಕೊಳ್ಳುತ್ತಿದ್ದರು. ರಾಯರ ಮನಸ್ಸು ಎಷ್ಟು ವಿಶಾಲವಾಗಿತ್ತೆಂದರೆ ಪ್ಲೇಗಿನಲ್ಲಿ ಮಡದಿ ಮಕ್ಕಳನ್ನು ಕಳೆದುಕೊಂಡು ಕೃಷ್ಣರಾಜಪೇಟೆಯಿಂದ ಹೊಸಹಳ್ಳಿಗೆ ಬಂದ ಶಾಮಣ್ಣನವರ ಕಥೆ ಕೇಳಿ ತಮ್ಮ ಮನೆಯಲ್ಲಿಯೇ ಅವರು ಇರುವಂತೆ ಹೇಳುವ ಮನಸ್ಸು ಅವರದಾಗಿತ್ತು. ಕುಮಾರವ್ಯಾಸ ಭಾರತ ಪಠಣ ಅವರಿಬ್ಬರ ಸ್ನೇಹವನ್ನು ಇನ್ನಷ್ಟು ಹತ್ತಿರವಾಗುವಂತೆ ಮಾಡಿತು. ಮನೆಯ ಆಗು-ಹೋಗುಗಳೆಲ್ಲದರದಲ್ಲಿಯೂ ಶಾಮಣ್ಣನವರ ಆಲೋಚನೆಯು ಒಂದಾಗಿತ್ತು. ಅಷ್ಟರಮಟ್ಟಿಗೆ ಅವರು ಮನೆಯಲ್ಲಿಯೇ

ಒಬ್ಬರಾಗಿದ್ದರು.

ರಾಯರ ಪತ್ನಿ ಮೀನಾಕ್ಷಮ್ಮ ಗಂಡನಿಗೆ ತಕ್ಕ ಹೆಂಡತಿ. ಊರಿನವರ ಪಾಲಿಗೆ ದೇವತೆಯ ಸ್ಥಾನದಲ್ಲಿದ್ದರು. ಅವರ ಮಾತಿಗೆ ಎಲ್ಲರೂ ಗೌರವ ಕೊಡುತ್ತಿದ್ದರು. ಊರ ಹೆಣ್ಣು ಮಕ್ಕಳು ಒಂದು ಒಡವೆ ಮಾಡಿಸಿಕೊಳ್ಳಬೇಕಾದರೆ, ಒಂದು ವಸ್ತುವನ್ನು ಕೊಂಡುಕೊಳ್ಳಬೇಕಾದರೆ ಅವರ ಸಲಹೆ ಮಾರ್ಗದರ್ಶನ ಬೇಕಾಗಿತ್ತು. ಅಷ್ಟರ ಮಟ್ಟಿಗೆ ಊರಿನವರ ಬಾಳಲ್ಲಿ ಹಾಸುಹೊಕ್ಕಾಗಿದ್ದರು. ಮೀನಾಕ್ಷಮ್ಮನವರು ತನಗೆ ಮಕ್ಕಳಾಗದಿದ್ದಾಗ ಗಂಡನಿಗೆ ಇನ್ನೊಂದು ಮದುವೆ ಮಾಡುವ ತ್ಯಾಗ ಮನಸ್ಸು ಅವರದಾಗಿತ್ತು. ಸಾವಿತ್ರಿ ತನ್ನ ಸವತಿಯಾಗಿ ಬಂದಾಗಲೂ ಅವಳನ್ನು ಒಡಹುಟ್ಟಿದ ಸಹೋದರಿಯಾಗಿ ಕಾಣುವ, ಮನೆಯ ಸಮಸ್ತ ಜವಬ್ದಾರಿಯನ್ನು ಸಮನಾಗಿ ಹಂಚಿಕೊಳ್ಳುವ ವಿಶಾಲ ಮನಸ್ಸು ಅವರದಾಗಿತ್ತು. ತನ್ನ ವಜ್ರದ ಓಲೆಯನ್ನು ಸಾವಿತ್ರಿಯ ಕಿವಿಗೆ ಇಡುವಷ್ಟು ದೊಡ್ಡ ಮನಸ್ಸು ಅವರದಾಗಿತ್ತು. ಸಾವಿತ್ರಿಯ ಮಕ್ಕಳು ರಾಮಚಂದ್ರ ಗೋಪಾಲರನ್ನು ತನ್ನ ಮಕ್ಕಳೆಂದೇ ಭಾವಿಸುವ ದೊಡ್ಡ ಗುಣ. ತನಗೆ ಹುಟ್ಟಿದ ಲಕ್ಷ್ಮಣ ಹಾಗೂ ಶಾಂತರನ್ನು ಎಂದೂ ಮೇಲು ಮಾಡಿದವರಲ್ಲ, ಸಾವಿತ್ರಿಯ ಮಕ್ಕಳನ್ನು ಎಂದೂ ಕೀಳು ಮಾಡಿದವರಲ್ಲ. ತಮ್ಮ ಮನೆಗೆ ವಾರದ ಹುಡುಗನಾಗಿ ಬಂದ ವೆಂಕಟೇಶನ ಗುಣ, ಪ್ರತಿಭೆಯನ್ನು ನೋಡಿ ಅವನನ್ನು ತಮ್ಮ ಮಗನಂತೆಯೇ ಭಾವಿಸಿದ ಹಿರಿಯ ಮನಸ್ಸು ಅವರದು. ತಮ್ಮ ಮಗಳು ಶಾಂತಳನ್ನು ಅವನಿಗೆ ಮದುವೆ ಮಾಡಿಕೊಡುವಷ್ಟು ಧಾರಳ ಮನಸ್ಸು ಅವರದು.

ಗೌರಮ್ಮ ನವರ ಸಾವಿನಿಂದ ಕಥೆ ಅನಿರೀಕ್ಷಿತ ತಿರುವನ್ನು ಪಡೆದುಕೊಳ್ಳುತ್ತದೆ. ಗೌರಮ್ಮನವರು ತೀರಿಕೊಂಡ ವಾರನಕ್ಷತ್ರ ಸರಿಯಿಲ್ಲದ ಕಾರಣ ಮನೆಯಲ್ಲಿ ಶಾಂತಿಯಾಗಬೇಕು, ಮನೆಯನ್ನು ಬಿಡಬೇಕು ಎಂದು ಸುಬ್ಬಾಭಟ್ಟರು ಹೇಳಿದರು. ಆ ಕಾರಣಕ್ಕಾಗಿ ರಾಯರ ಇಡೀ ಕುಟುಂಬ ಬೆಂಗಳೂರಿಗೆ ಬಂದು ನೆಲೆಸಿತು. ಹೊಸಹಳ್ಳಿಯಲ್ಲಿದ್ದ ಕೌಟುಂಬಿಕ ಶಾಂತಿ ಬೆಂಗಳೂರು ನಗರ ಪರಿಸರಕ್ಕೆ ರಾಯರ ಕುಟುಂಬ ಕಾಲಿಟ್ಟಾಗ ನೆಮ್ಮದಿ ಕಳೆದು ಕೊಳ್ಳುತ್ತದೆ. ರಾಯರ ಮಗನಾದ ರಾಮಚಂದ್ರನ ಒರಟಾದ ನಡವಳಿಕೆ, ಹಟಮಾರಿತನ, ಸರ್ವಾಧಿಕಾರ ಇವೆಲ್ಲವೂ ರಾಯರ ಕುಟುಂಬದ ಶಾಂತಿ ಕೆಡಿಸಿ ಬಿಡುತ್ತದೆ. ನಂತರ ಮೀನಾಕ್ಷಮ್ಮ ನವರ ಸಾವು, ಲಕ್ಷ್ಮಣನ ಹೆಂಡತಿ ಜಯಲಕ್ಷ್ಮಿಯ ಸಾವು, ರಾಯರ ಸಾವು ಗತಿಸುತ್ತದೆ. ಇದರಿಂದಾಗಿ ಶಾಮಣ್ಣನವರು ಹಾಗೂ ವೆಂಕಟೇಶ ಮನೆಬಿಟ್ಟು ಹೋಗುವರು. ನಂದಗೋಕುಲದಂತಿದ್ದ ರಾಯರ ತುಂಬಿದ ಸಂಸಾರ ರಾಮಚಂದ್ರನ ಕೋಪ, ದಬ್ಬಾಳಿಕೆಯಿಂದಾಗಿ, ತಾತ್ಸಾರ ಭಾವನೆಗೆ ಕಾರಣವಾಗುವುದು. ಜಯಾಳ ಸಾವಿನ ನಂತರ ಲಕ್ಷ್ಮಣ ಬದುಕು ಶೂನ್ಯವಾಗುತ್ತದೆ. ಜಯಾಳ ಸ್ಫೂರ್ತಿ ಕಾದಂಬರಿಯ

ಉತ್ತರಾರ್ಧದಲ್ಲಿ ಶೂನ್ಯತೆಯ ತೆರೆಯನ್ನು ತೆರೆಸುತ್ತದೆ.

ಸಂಧ್ಯಾರಾಗದ ನಿಜವಾದ ನಾಯಕ ಲಕ್ಷ್ಮಣನೇ ಸಂಗೀತಗಂಧವೇ ಇಲ್ಲದ ಕುಟುಂಬದಿಂದ ಬಂದ ಲಕ್ಷ್ಮಣನಲ್ಲಿ ಸಂಗೀತ ದೈವದತ್ತವಾಗಿ ಬಂದಿರುತ್ತದೆ. ಹಳ್ಳಿಯ ಹನುಮಂತನ ಗುಡಿಯಲ್ಲಿ ಶನಿವಾರದ ಭಜನೆಯಲ್ಲಿ ಹಾಡಿಕೊಂಡಿದ್ದ ಲಕ್ಷ್ಮಣನಲ್ಲಿ ಅಂತರ್ಗತವಾಗಿದ್ದ ದೈವೀ ಕಲೆಯನ್ನು ಮೊದಲು ಗುರುತಿಸಿದವರು ಮುಳಬಾಗಿಲು ಚೆನ್ನಪ್ಪ. ೧"ಮಗಾ ಚೆಂದಾಕಿ ಶಾರದವ್ವೋರ ಸೇವೆ ಮಾಡು ನಿನ್ನ ವಾಣೀಲಿ ತಾಯಿ ಬೀಜಾಕ್ಷರ ಬರೆದವ್ಳೆ, ನಾನು ಸಂಗೀತಾ ಕಲಿಯೋಕೆ ಒಂದು ಜೀವಮಾನ ತೇದಿದ್ದೀನಿ, ಅದರ ಓನಾಮ ಕೂಡ ನಂಗೆ ಗೊತ್ತಾಗಿಲ್ಲ. ನೀನು ಕಲಿಯೋಕೆ ಉಟ್ಟಿರೋ ಗುರು"೧ ಎನ್ನುವ ಮೂಲಕ ಅವನಲ್ಲಿ ಸಂಗೀತದ ಕಲಿಕೆಯ ಹುಚ್ಚನ್ನು ಮತ್ತಷ್ಟು ಹಿಮ್ಮಡಿಸಿದರು.

ಬೆಂಗಳೂರಿಗೆ ಬಂದು ನೆಲೆಸಿದ ಮೇಲೆ ಅನಂತಾಚಾರ್ಯರಲ್ಲಿ ಲಕ್ಷ್ಮಣ ಸಂಗೀತ ಕಲಿಯಲು ಪ್ರಾರಂಭಿಸಿದ. ಲಕ್ಷ್ಮಣ ಸಂಗೀತದ ಅಭ್ಯಾಸವನ್ನು ಆಸಕ್ತಿಯಿಂದ ಮಾಡತೊಡಗಿದನು. ಲಕ್ಷ್ಮಣನ ಹೆಂಡತಿ ಜಯಲಕ್ಷ್ಮಿ ಬಾವಿಯಲ್ಲಿ ನೀರು ಸೇದಲು ಹೋಗಿ ಆಯಾಸದಿಂದ ಕೆಳಗೆ ಬಿದ್ದು ಆಸ್ಪತ್ರೆ ಯಲ್ಲಿ ಪ್ರಾಣ ನೀಗಿದಾಗ ಲಕ್ಷ್ಮಣನ ಬದುಕು ಶೂನ್ಯವಾಗಿ ಬಿಡುತ್ತದೆ. ಜಯ ಅವನ ಸಂಗೀತದ ಒಂದು ಭಾಗವೇ ಆಗಿದ್ದಳು. ಜಯಾಳೇ ಇಲ್ಲವಾದ ಮೇಲೆ ಅವನಿಗೆ ಮನೆ ಬೇಡವಾಗುತ್ತದೆ. ಹುಚ್ಚನಂತೆ ಊರೂರು ಅಲೆಯುತ್ತ ಲಕ್ಷ್ಮಣ ಮದರಾಸಿಗೆ ಬರುತ್ತಾನೆ. ತಿರುವಳ್ಳಿ ಕೇಣಿಯಲ್ಲಿ ಯಾರೋ ಭಾಗವತರು ಹಾಡುತ್ತಿದ್ದರು. ಅವರು ತೋಡಿಯ ಆಲಾಪನೆಗೆ ತೊಡಗಿದಾಗ ಲಕ್ಷ್ಮಣನ ಎದೆ ಹೊಡೆದುಕೊಳ್ಳಲಾರಂಭಿಸಿತು. ಆಲಾಪನೆ ಮುಗುಯುತ್ತಿದ್ದಂತೆ ಅದನ್ನು ಕೇಳುತ್ತಿದ್ದ ಲಕ್ಷ್ಮಣ ಪ್ರಜ್ಞೆತಪ್ಪಿ ಕೆಳಗೆ ಬಿದ್ದಾಗ ತಲೆಗೆ ಪೆಟ್ಟಾಯಿತು. ಅವನು ಕೆಳೆಗೆ ಬಿದ್ದಾಗ ಅವನನ್ನು ಎಚ್ಚರಿಸಿದವರು ಮದರಾಸಿನ ಅರುಣಾಚಲ ಮೊದಲಿಯಾರ್ ಡಾಕ್ಟರ್ ರವರು.

ಡಾಕ್ಟರ್‌ನ ಪತ್ನಿ ಮೈಸೂರಿನವರು. ಸಂಗೀತ ಪ್ರಿಯರಾದ ಆ ದಂಪತಿಗಳ ಸಕಾಲಿನ ನೆರವಿಂದ ತಂಜಾವೂರು ಕೃಷ್ಣಯ್ಯರವರ ಬಳಿ ಸಂಗೀತ ಕಲಿಯಲು ಲಕ್ಷ್ಮಣ ಹೋಗುವನು. ಲಕ್ಷ್ಮಣನ ಸಂಗೀತದ ಮೇಲೆ ತೀವ್ರ ಹಂಬಲವನ್ನು ಗಮನಿಸಿದ ಅವರು ಪ್ರಾಮಾಣಿಕವಾಗಿ ೨"ಲಕ್ಷ್ಮಣಾ ನೀನು ನನ್ನ ಶಿಷ್ಯನಾಗಿ ಬಂದದ್ದು ನನ್ನ ಭಾಗ್ಯಪ್ಪ. ನಿನ್ನ ವಿದ್ಯೆ ದೈವಿಕವಾದದ್ದು ಸಂಗೀತಶಾಸ್ತ್ರ ವಿದ್ಯೆಯನ್ನು ಹೇಳಿಕೊಡುತ್ತೆ. ಅದು ನಿಜವಾದ ವಿದ್ಯೆಯಲ್ಲ, ವಿದ್ಯೆ ಹೃದಯದಿಂದ ಬರಬೇಕು, ಹೃದಯಕ್ಕೆ ಸೇರಬೇಕು ನಿನ್ನಲಿದೆ ಅದು. ನಿನ್ನಂತಹವನಿಗೆ ವಿದ್ಯಾದಾನ ಮಾಡಿದರೆ ನನ್ನ ಜನ್ಮ ಸಾರ್ಥಕವಾಗುತ್ತದೆ"೨. ಎಂದು ಕೃಷ್ಣಯ್ಯನವರು. ತಮ್ಮ ಕಲೆಯ ಅಪರೂಪದ ಪಲ್ಲವಿಗಳನ್ನು

ಶಿಷ್ಯನಿಗೆ ಹೇಳಿಕೊಟ್ಟರು. ತಮ್ಮ ಕಛೇರಿಗಳಿಗೆಲ್ಲ ಕರೆದುಕೊಂಡು ಹೋಗಿ ಅವನಿಂದ ಹಾಡಿಸಿದರು. ಹೀಗಾಗಿ ದಕ್ಷಣದಲ್ಲಿ ಅವನ ಕೀರ್ತಿ, ಹೆಸರು ಮನೆಮಾತಾಯಿತು.

ಜಯಂತ್ಯೋತ್ಸವವಾದುದೇ ತಡ,ಲಕ್ಷ್ಮಣನಿಗೆ ಬಿಡುವಿಲ್ಲದಂತಾಯಿತು. ಬೆಳಿಗ್ಗೆಯಿಂದ ಸಂಜೆಯವರೆಗೂ ತಂಡ ತಂಡವಾಗಿ ಶಿಷ್ಯರು ಬರಲಾರಂಭಿಸಿದರು. ಕಲಿತವರು ಬರುತ್ತಿದ್ದರು, ಕಲಿಯಬೇಕೆಂಬ ಆಸೆ ಇದ್ದವರೂ ಬರುತ್ತಿದ್ದರು. 'ಇವನದೇನು ಮಹಾ ಪಾಂಡಿತ್ಯ ನಾನು ಸೋಲಿಸಿಬಿಡುತ್ತೇನೆ' ಎಂದು ಕೆಲವರು ಬಂದು ತಾವೇ ಸೋತು ಲಕ್ಷ್ಮಣ ನ ಶಿಷ್ಯ ವೃತ್ತಿಯನ್ನು ಅವಲಂಬಿಸುತ್ತಿದ್ದರು. ಯಾರು ಬಂದು ಕೇಳಿದರೂ ಹಾಡುವನು. ಯಾರು ಕೇಳಿದರೂ ಪಾಠ ಹೇಳಿಕೊಡುತ್ತಿದ್ದನು. ಪಾಠ ಪ್ರವಚನದಲ್ಲಿ ಒಂದು ನಿಯಮವನ್ನು ಮಾತ್ರ ಅನುಸರಿಸುತ್ತಿದ್ದ. ಶರೀರ ಸಂಪತ್ತಿಲ್ಲದವರಿಗೆ ಬಾಯಿ ಹಾಡುಗಾರಿಕೆಯನ್ನು ಹೇಳಿಕೊಡುತ್ತಿರಲಿಲ್ಲ. ಅವರನ್ನು ವಾದ್ಯವಾದನ ಕಲಿಯಿರೆಂದು ಹೇಳುತ್ತಿದ್ದ.

"ಸುಖವಾದ ಶಾರೀರವಿಲ್ಲದಿದ್ದರೆ ರಾಗಭಾವಗಳು ಹೊರಡುವುದಿಲ್ಲ." ಸುಖವಾದ ಶಾರೀರ ಶೃತಿ ಮಾಡಿದವೀಣೆ ಇದ್ದಹಾಗೆ. ಶೃತಿ ಇಲ್ಲದ ವೀಣೆ ಹೇಗೆ ಕೇಳಲು ಕರ್ಕಶವೋ ಹಾಗೆ ಶಾರೀರ ಇಲ್ಲದವನ ಸಂಗೀತ. ಶಾರೀರವಿಲ್ಲದವರು ಬಾಯಿ ಹಾಡುಗಾರಿಕೆ ಕಲಿತು ಸಂಗೀತದ ಹೆಸರನ್ನೇ ಕೆಡಿಸಿಬಿಟ್ಟಿದ್ದಾರೆ. ಹಿಂದುಸ್ಥಾನಿ ಸಂಗೀತಗಾರರರಲ್ಲಿ ಶಾರೀರವಿಲ್ಲದವರೇ ಅಪರೂಪ ಎಂಬುದು ಲಕ್ಷ್ಮಣನ ಅಭಿಪ್ರಾಯ.

ಮದಾರಸಿನಲ್ಲಿ ತನ್ನನ್ನು ಉಪಚರಿಸಿದ ಅರುಣಾಚಲ ಮೊದಲಿಯಾರ್ ಡಾಕ್ಟರ್ ಪೂರ್ವಿ ಹಾಡಿ ಎಂದಾಗ ಲಕ್ಷ್ಮಣ ಅದೊಂದು ರಾಗ ಬೇಡ, ಬೇರೆ ಯಾವುದನ್ನು ಬೇಕಾದರೂ ಹಾಡುತ್ತೇನೆ ಎಂದರು. ಕೃಷ್ಣಯ್ಯ ರವರನ್ನೂ 'ಪೂರ್ವಿ ಕೃಷ್ಣಯ್ಯರ್' ಎಂದು ಕರೆಯುವ ವಾಡಿಕೆಯಿದ್ದರೂ ಒಂದು ದಿವಸವೂ ಅವರಿಂದ ಆ ರಾಗದ ಹಾಡುಗಾರಿಕೆ ಕೇಳಿರಲಿಲ್ಲ. ಒಂದು ದಿವಸ ಲಕ್ಷ್ಮಣ "ಪೂರ್ವಿಯನ್ನು ಹಾಡಿ ತೋರಿಸಿ ಎಂದು ಗುರುಗಳನ್ನು ಕೇಳಿಕೊಂಡನು. ಅದು ಬೇಡಪ್ಪ ಆವೊಂದು ರಾಗ ಮಾತ್ರ ಬೇಡ" ಎಂದು ಗುರುಗಳು ಮಾತು ಬದಲಿಸಿದರು. ಕೃಷ್ಣಯ್ಯನವರ ಪತ್ನಿಯ ಒತ್ತಾಯದಿಂದ ಗುರುಗಳು ಒಪ್ಪಿ ಒಂದು ಸಂಜೆ ಮನೆಯಲ್ಲಿಯೇ ಸಂಗೀತ ಕಛೇರಿಯನ್ನು ಏರ್ಪಡಿಸಿದರು. ಕೃಷ್ಣಯ್ಯನವರು ಅಮೋಘವಾಗಿ ರಾಗವಿಸ್ತಾರ ಮಾಡಿ ಅದರ ಅಪೂರ್ವವಾದ ಸಂಚಾರವನ್ನು ಹಾಡಿನಲ್ಲಿ ತೋರಿಸಿದರು. ಸಂಧ್ಯಾರಾಗದ ಗಹನ ಗಂಭೀರತೆಯು ಹಾಡಿಕೆಯಲ್ಲಿ ಎದ್ದು ಕಾಣುತ್ತಿತ್ತು. ಪೂರ್ವಿರಾಗವನ್ನು ಮುಗಿಸಿ "ಲಕ್ಷ್ಮಣಾ, ಇದು ಪೂರ್ವಿ-ಆದರೆ ಸಂಧ್ಯಾರಾಗ ಪೂರ್ವಿಯಲ್ಲ. ನನಗೆ ನಿಜವಾಗಿಯೂ ಈ ರಾಗವನ್ನು ಹಾಡುವುದಕ್ಕೆ ಬರುವುದಿಲ್ಲ. ಭೂಮಿಯನ್ನು

ಭೇದಿಸಿಕೊಂಡು ರಾಗ ಬರಬೇಕು. ನನ್ನ ಪೂರ್ವಿ ಹೃದಯದಿಂದ ಬರುವುದಿಲ್ಲ, ತಲೆಯಿಂದ ಬರುತ್ತದೆ. ನಿನಗೆ ಪೂರ್ವಿಯ ದತ್ತಿ ಕೊಟ್ಟಿದ್ದೇನೆ, ನಾನು ಆಸೆಪಟ್ಟುಕೊಂಡಿದ್ದ ಹಾಗೆ ಎಂದಾದರೂ ನೀನು ಹಾಡಿಬಿಡು, ಅಂದು ನಾನು ಋಣಮುಕ್ತ ನಾಗುತ್ತೇನೆ. ನಿನ್ನಿಂದ ನಾನು ನಿರೀಕ್ಷಿಸುವ ಗುರುದಕ್ಷಿಣೆ ಅದೇಕಣಪ್ಪಾ" ಎಂದರು. 'ಅಪ್ಪಣೆಯಾದಂತಾಗಲಿ' ಎಂದು ಲಕ್ಷ್ಮಣನ ಮನಸ್ಸು ಖಿನ್ನವಾಯಿತು. ಗುರುಗಳೇ ಹೇಳಿದರು ಲಕ್ಷ್ಮಣನಿಗೆ "ನಿನ್ನ ವಿದ್ಯೆ ದೈವೀಕವಾದದ್ದು. ಅದನ್ನು ಸತ್ಪಾತ್ರರಿಗೆ ಧಾರೆಯೆರೆ. ನಿನ್ನ ಬೆಳಕಿನಿಂದ ಹಲವು ಹೃದಯಗಳು ಬೆಳಗುತ್ತವೆ. ಬೆಳಗಿಸು ಲೋಕವನ್ನೇ ಅಂಧಕಾರ ಕೂಪದಿಂದ ನಿವೃತ್ತಿ ಮಾಡು. ಇದು ಪೂರ್ವಿರಾಗಕ್ಕೂ ಲಕ್ಷ್ಮಣನ ಬದುಕಿಗೂ ಸಂಬಂಧ ಇರುವುದಕ್ಕೆ ಮುಖ್ಯವಾದ ಕಾರಣವಾಯಿತು.

ವೆಂಕಟರಾಮ ಭಾಗವತರ ಹಾಡುಗಾರಿಕೆಯಲ್ಲಿನ ದೋಷವನ್ನು ಲಕ್ಷ್ಮಣ ತಿಳಿಸಿ, ಹಾಡಬೇಕಾದ ವಿಧಾನವನ್ನು ಹಾಡಿ ತೋರಿಸಿ ಕೊಟ್ಟಾಗ ಭಾಗವತರು ಎದ್ದು ನಿಂತು ತಮ್ಮ ಕೈಯಲ್ಲಿದ್ದ ತೋಡಾವನ್ನು ತೆಗೆದು ಮುಂದಿಟ್ಟು ಸಾಷ್ಟಾಂಗ ನಮಸ್ಕಾರ ಮಾಡುವರು. ಶೇಷಣ್ಣನವರು ಆನಂದದಿಂದ ಕಣ್ಣೀರನ್ನು ನಿವಾರಿಸುಕೊಂಡು ಲಕ್ಷ್ಮಣನನ್ನು ಅಪ್ಪಿಕೊಳ್ಳುವರು. ಲಕ್ಷ್ಮಣ ತಾನು ತಂಜಾವೂರಿನ ಕೃಷ್ಣಯ್ಯರವರ ಶಿಷ್ಯನೆಂದು ಹೇಳಿದಾಗ ವೆಂಕಟರಾಮ ಭಾಗವತರು ನೀವು ನನ್ನ ಗುರುಗಳ ಶಿಷ್ಯರೇ, ಹಾಗಾದರೆ ನನಗೆ ಅಣ್ಣಂದಿರಾದಿರಿ ಎಂದು ಅಪ್ಪಿಕೊಳ್ಳುವರು. ಶೇಷಣ್ಣನವರು ನೀವು ಮೈಸೂರಿನ ಕೀರ್ತಿಯನ್ನು ಕಾಪಾಡಿದಿರಿ. ನಿಮ್ಮ ಅಮೋಘವಾದ ಸಂಗೀತವನ್ನು ಪ್ರಭುಗಳು ಕೇಳಬೇಕು ಎಂದು ಹೇಳುವರು. ಶೇಷಣ್ಣ ನವರು ಅರಮನೆಯಲ್ಲಿ ಸಂಗೀತ ಕಛೇರಿ ಏರ್ಪಡಿಸುವರು. ಅರಮನೆಯವರು ಕೊಟ್ಟ 1500 ರೂಪಾಯಿಗಳ ಚೆಕ್ಕನ್ನು ಶೇಷಣ್ಣನವರಿಗೆ ಹಿಂದಿರುಗಿಸಿ ಸಂಗೀತ ಕಲಿಯಲು ತೊಂದರೆ ಪಡುವ ವಿದ್ಯಾರ್ಥಿಗಳಿಗೆ ಹಂಚಿಬಿಡಿ ಎಂದು ಲಕ್ಷ್ಮಣ ಬೆಂಗಳೂರಿನ ತನ್ನ ತಂಗಿ ಶಾಂತ-ವೆಂಕಟೇಶರ ಮನೆಗೆ ಹಿಂದಿರುಗಿ ಬರುವನು.

ಲಕ್ಷ್ಮಣನ ಅಣ್ಣನಾದ ರಾಮಚಂದ್ರರಾಯರು ಹಣದ ಆಸೆಗಾಗಿ ಮಾಡಿದ ಮೋಸವನ್ನು, ಲಕ್ಷ್ಮಣನ ತಂಗಿಯಗಂಡ ವೆಂಕಟೇಶ 'ವೀರ ಕರ್ನಾಟಕ' ಪತ್ರಿಕೆಯಲ್ಲಿ ಹೊರಡಿಸಿದನು. ರಾಮಚಂದ್ರನು ಅದರಿಂದಾಗಿ ತನ್ನ ಕೆಲಸವನ್ನು ಕಳೆದುಕೊಳ್ಳುವ ಪರಿಸ್ಥಿತಿ ಬಂದಾಗ ಬೇರೆ ದಾರಿಯಿಲ್ಲದೆ ವೆಂಕಟೇಶನನ್ನು ನಾನು ಮಾಡಿದ್ದು ತಪ್ಪಾಯ್ತು ಎಂದು ಕೇಳಿ ಕೊಳ್ಳುವನು. ಅವನಿಂದ ಅವಮಾನಿತನಾಗಿದ್ದ ವೆಂಕಟೇಶ ತನ್ನ ಪ್ರತಿಜ್ಞೆಯನ್ನು ಮರೆತು ಅವನ ನೆರವಿಗೆ ಧಾವಿಸುವನು. ತನ್ನ ತಪ್ಪನ್ನು ಕ್ಷಮಿಸುವಂತೆ ರಾಮಚಂದ್ರ ಲಕ್ಷ್ಮಣನಲ್ಲಿ ಕ್ಷಮೆ ಬೇಡುವನು.

ನಗರ ಸಭೆಯವರು ಏರ್ಪಡಿಸಿದ್ದ ಸನ್ಮಾನದಲ್ಲಿ ಲಕ್ಷ್ಮಣ ಭಾಗವಹಿಸಿ ಅಲ್ಲಿ ಅವನು ಹಾಡಲು ಶುರು ಮಾಡಿದನು. ಶಂಕರಾಭರಣದಿಂದ ಕಛೇರಿ ಆರಂಭವಾಯಿತು. ಎಲ್ಲಾ ಸ್ವರಗಳಿಂದ ಕೂಡಿದ ಪೂರ್ಣರಾಗವನ್ನು ಬೇಕೆಂತಲೇ ಆಯ್ದುಕೊಂಡಿದ್ದ. 'ಮಡಿಕೆಯ ಮಾಡುವರೇ ಮಣ್ಣೇ ಮೊದಲು' ಎಂಬ ಬಸವಣ್ಣನವರ ವಚನವನ್ನು ಹಾಡಿದ. ಮುಂದೆ ಪುರಂದರ ದಾಸರ 'ಹೊಲೆಯ ಹೊರಗಿಹನೆ ಊರೊಳಗಿಲ್ಲವೇ' ಎಂಬ ಕೀರ್ತನೆಯನ್ನು ಮುಖಾರಿಯಲ್ಲಿ ಹಾಡಿ, ಕೇದಾರಗೌಳದಲಲ್ಲಿ ಕನಕದಾಸರ 'ತಲ್ಲಣಿಸದಿರು ಕಂಡ್ಯಾ ಎಲೆ ಮನವೇ' ಎಂಬ ಕೀರ್ತನೆಯನ್ನು ಹಾಡಿದ. ನಗರ ಸಭೆಯ ಗಂಟೆ ತನ್ನಷ್ಟಕ್ಕೆ ತಾನು ಮುಂದೆ ಹೋಗುತ್ತಿತ್ತು. ಅದರ ಕಡೆಗೆ ಒಬ್ಬರ ಲಕ್ಷ್ಯವೂ ಇಲ್ಲ. ಒಂಭತ್ತು ಗಂಟೆ ಸೂಚಿಸಲು ವಿದ್ಯುದ್ದೀಪಗಳು ಮಿನುಗಿದವು. ಸಭಾ ಸದರು ಗಡಿಗಾರಗಳನ್ನು ತಿದ್ದಿಕೊಂಡು ಮತ್ತೆ ಭದ್ರವಾಗಿ ಕುಳಿತರು. ಲಕ್ಷ್ಮಣನಿಗೆ ಮುಗಿಸುವ ಯೋಚನೆ ಇರಲಿಲ್ಲ. ಸಭಾ ಸದರು ಮನೆ ಮಠ ಎಲ್ಲವನ್ನು ಮರೆತು ಸಂಗೀತದಲ್ಲಿ ಲೀನರಾಗಿ ಬಿಟ್ಟಿದ್ದರು.

ಸರಸ್ವತಿ ರಾಗದಲ್ಲಿ ಅಕ್ಕ ಮಹಾದೇವಿಯ 'ತುಂಬಿದುದು ತುಳುಕದು ನೋಡಾ' ಎಂಬ ವಚನವನ್ನು ಹಾಡಿದ. ಹಾಡಿಕೆಯು ತುಳುಕದೇ ತುಂಬಿಬರುತ್ತಿತ್ತು. ಜೀವನ್ಮುಕ್ತೆ ಮಹಾದೇವಿ ಅಕ್ಕನ ವಚನ ಅಮೃತದಂತೆ ಲಕ್ಷ್ಮಣನ ಬಾಯಲ್ಲಿ ಬರುತ್ತಿತ್ತು. ಅನಂತರ ಹಿಂದೋಳ ವಸಂತರಾಗದಲ್ಲಿ ಬಸವಣ್ಣನವರ 'ಛಲಬೇಕು ಶರಣಂಗೆ' ಎಂಬ ವಚನವನ್ನು ಹಾಡಿದ. ವಚನಗಳ ಹಾಡಿಕೆಯಲ್ಲಿ ತೋರಿ ಬರುತ್ತಿದ್ದ ಶ್ರದ್ಧಾ ಭಕ್ತಿಗಳನ್ನು ಕಂಡು 'ತಾನು ವೀರ ಶೈವನಲ್ಲದಿದ್ದರು ಈ ವಚನಗಳನ್ನು ಹೇಗೆ ಹೃದಯಂಗಮವಾಗಿ ಹಾಡುತ್ತಾನೆ' ಎಂದು ಸಭಾ ಸದರು ಬೆರಗಾದರು. ಲಕ್ಷ್ಮಣನ ಕಲೆ ಧರ್ಮ, ಮತಗಳನ್ನು ಮೀರಿತ್ತು! ತನ್ನ ಔನ್ನತ್ಯದಿಂದ ಅನಂತತೆಯಲ್ಲಿ ಶ್ರೇಷ್ಠ ಸ್ಥಾನವನ್ನು ದೊರಕಿಸಿಕೊಮಡಿತ್ತು. ಪ್ರಗತಿಯ ಆ ಮಟ್ಟದಿಂದ ಪುರಂದರದಾಸರು, ಕನಕದಾಸರು, ಬಸವಣ್ಣನವರು, ಪ್ರಭುದೇವರು, ಮಹಾದೇವಿಯಕ್ಕ ಎಲ್ಲರನ್ನು ಸಮಾನ ದೃಷ್ಟಿ, ಸಮಾನ ಧರ್ಮ, ಸಮಾನ ಭಕ್ತಿ ಗೌರಗಳಿಂದ ನೋಡಬಹುದೆಂದು ಲಕ್ಷ್ಮಣ ತೋರಿಸಿಕೊಡುತ್ತಿದ್ದ.

ಕಲ್ಯಾಣಿಯನ್ನು ತೆಗೆದುಕೊಂಡ ವಿಸ್ತಾರವಾಗಿ ರಾಗವನ್ನು ಹಾಡಿ ಪುರಂದರದಾಸರ 'ತನುವ ನೀರೊಳಗದ್ದಿ ಫಲವೇನು' ಎಮಬ ಕೀರ್ತನೆಯನ್ನು ಹಾಡಿದ. ವಿಚಾರವಿಲ್ಲದ ಭಕ್ತಿ ಹೀನ ಭಕ್ತಿಯೆಂಬ ಭಾವನೆ ಈ ಕೀರ್ತನೆಯಲ್ಲಿಯೂ ಮೂಡಿತು. ಮುಂದೆ ಮಧ್ಯಮಾವತಿ ರಾಗದಲ್ಲಿ ಹಾಡಿದ ಪುರಂದರದಾಸರ 'ಜಂಗಮರು ನಾವು ನೀವೇ ಕೇಳಿ' ಎಂಬ ಕೀರ್ತನೆಯಲ್ಲಿಯೂ ಮೂಡಿತು. ಮುಂದೆ ಬಿಲಹರಿಯಲ್ಲಿ 'ಸತಿ ಭಕ್ತೆಯಾದರೆ ಹೊಲೆ ಗುಂಜಲಾಗದು' ಎಂಬ ಪ್ರಭುದೇವರ ವಚನವನನ್ನು ಹಾಡಿ ಆನಂದ ಭೈರವಿ ರಾಗಕ್ಕೆ ಬಂದುಬಿಟ್ಟ. ಲಕ್ಷ್ಮಣನಿಗೆ ಆವೇಶ ಬಂದಂತಾಗಿತ್ತು.

ಬಸವಣ್ಣನವರ

'ಎನ್ನ ಕಾಯವ ದಂಡಿಗೆಯ ಮಾಡಯ್ಯ

ಎನ್ನ ಶಿರವ ಸೋರೆಯ ಮಾಡಯ್ಯ

ಎನ್ನ ನರವ ತಂತಿಯ ಮಾಡಯ್ಯ

ಎನ್ನ ಬೆರಳ ಕಡ್ಡಿಯ ಮಾಡಯ್ಯ ಬತ್ತೀಸರಾಗವ ಹಾಡಯ್ಯ

ಎನ್ನ ಉದರಲೊತ್ತಿ ನಿನ್ನ ಜಯಗಾನವ ಚಾರಿಸು ಕೂಡಲ ಸಂಗಮದೇವ'

ಎಂಬ ವಚನವಂತೂ ಲಕ್ಷ್ಮಣನ ಮನೋದರ್ಮವನ್ನೇ ಸೂಚಿಸುತ್ತಿತ್ತು. ಅವನ ಚಿತ್ತವೃತ್ತಿಯಲ್ಲಿ ಹೆಂಡತಿ ಜಯಾಳ ನೆನಪು ಮೂಡಿಬಿಟ್ಟಿತು. ಇನ್ನೊಂದೆಡೆ ಅವನ ಗುರುಗಳು ನಿಂತು ಹರಸುತ್ತಿದ್ದಂತೆ ಭಾಸವಾಯಿತು. ಆನಂದ ಭೈರವಿಯನ್ನು ಮುಗಿಸಿದ ಲಕ್ಷ್ಮಣ ಪೂರ್ವಿಯ ರಾಗವನ್ನು ಎತ್ತಿಕೊಂಡನು. ರಾಗ ಮೊದಲನೆಯ ಕಾಲದಿಂದ ಎರಡನೆಯ ಕಾಲವನ್ನು ಮುಟ್ಟಿತು. ಲಕ್ಷ್ಮಣನ ಕಣ್ಣುಗಳಲ್ಲಿ ಕಣ್ಣೀರು ಧಾರೆಧಾರೆಯಾಗಿ ಹರಿಯತೊಡಗಿತು. ರಾಗ ಎರಡನೆಯ ಕಾಲದಿಂದ ಮೂರನೆಯ ಕಾಲಕ್ಕೆ ಹೋಯಿತು. ಲಕ್ಷ್ಮಣನ ಕಣ್ಣಿನಲ್ಲಿ ನೀರು ನಿಂತಿತು. ರಾಗೋಚಿತ ಮೊಗವು ಅವನ ಹಾಡಿಕೆಯಲ್ಲಿ ಕಾಣ ಬರುತ್ತಿದ್ದರೂ ಮನಸ್ಸು ಶಾಂತವಾಗಿತ್ತು. ರಾಗ ಮುಗಿಯುವ ಹೊತ್ತಿಗೆ ತಂಬೂರಿಯ ತಾರಕದ ತಂತಿ ಹಾರಿತು. ಆದರೆ ಢೇಂಕಾರವು ಸಭೆಯಲ್ಲಿ ಇದ್ದ ಜನರನ್ನು ಎಚ್ಚರಗೊಳಿಸಿತು. ತಂಬೂರಿಯು ಲಕ್ಷ್ಮಣನ ಕೈಯಿಂದ ಜಾರಿ ನೆಲಕ್ಕೆ ಉರುಳಿತು. ಲಕ್ಷ್ಮಣನೂ ಅದರ ಜೊತೆಯಲ್ಲಿಯೇ ನೆಲಕ್ಕೆ ಉರುಳಿದನು. 'ಜಯಾ' ಎಂಬ ಎರಡೇ ಅಕ್ಷರವು ಎಲ್ಲರ ಕಿವಿಯನ್ನು ಮುಟ್ಟಿತು.

ಅ.ನ.ಕೃ ತುಂಬಾ ಅರ್ಥಪೂರ್ಣವಾದ ಅಂತ್ಯವನ್ನು ಕಾದಂಬರಿಗೆ ತಂದಿರುವರು. ಅವರು ಕೊನೆಯಲ್ಲಿ ಹೇಳುವರು ಗಾಯಕನು ಸಂಧ್ಯಾ ರಾಗದಲ್ಲಿ ತನ್ನ ಆತ್ಮ ಪ್ರಣತಿಯನ್ನು ತೇಲಿ ಬಿಟ್ಟಿದ್ದನು. ಮುಂದೆ ಬರಲಿದ್ದ ಗಾಢಾಂಧಕಾರಕ್ಕೆ ಆ ಪ್ರಣತಿಯ ತೇಜಸ್ಸೇ ಬೆಳಕು. ತನ್ನ ಜೀವನದ ಸಂಧ್ಯಾರಾಗವನ್ನು ಹಾಡಿ ಮುಗಿಸಿದ. ಮರುಕ್ಷಣವೇ ಉದಯರಾಗದ ಕರೆ-ಸಂಧ್ಯಾರಾಗ ಎಲ್ಲರ ಕಿವಿಗೂ ಬಿದ್ದಿತು. ಆದರೆ ಉದಯರಾಗ ಕೇಳಿಬಂದುದು ಲಕ್ಷ್ಮಣನೊಬ್ಬನಿಗೆ!

ಸಂಧ್ಯಾರಾಗದ ವೈಶಿಷ್ಟ್ಯವಿರುವುದು-ಸಂಗೀತಕ್ಕೆ ಮೀಸಲಿಟ್ಟ ಕಲಾವಿದನೊಬ್ಬನ ದುರಂತ ಬದುಕು ವಾಸ್ತವ ನೆಲೆಯಲ್ಲಿ ಚಿತ್ರಣಗೊಂಡಿರುವುದರಲ್ಲಿ ಇಲ್ಲಿನ ಎಲ್ಲಾ ಪಾತ್ರಗಳು ಪೂರ್ಣರೂಪದಲ್ಲಿ ಕಾದಂಬರಿಯ ಜೊತೆಗೆ ಸಾವಯವ ಸಂಬಂಧ ಪಡೆದುಕೊಂಡಿರುವುದರಲ್ಲಿ ಮನುಷ್ಯ ಸಂಬಂಧಗಳನ್ನು ಅ.ನ.ಕೃ ಚಿತ್ರಿಸುವಾಗ ಪರಿಣಾಮೈಕ್ಯತೆಯನ್ನು ಸಾಧಿಸಿರುವರು. ರಾಮಚಂದ್ರನ ವೈಪರೀತ್ಯಗಳಿಂದಾಗಿ ಕಾದಂಬರಿಯಲ್ಲಿನ ಹಲವು ಪಾತ್ರಗಳು ನೊಂದರೂ ಬದುಕಿನಲ್ಲಿ ಯಶಸ್ಸನ್ನು ಕಾಣುವರು. ವೆಂಕಟೇಶನನ್ನು ಮನೆಯಿಂದ ಹೊರಗೆ ಹೋಗುವಂತೆ ಮಾಡಿದ ರಾಮಚಂದ್ರ ಅದಕ್ಕೆ ತಕ್ಕ ಶಿಕ್ಷೆಯನ್ನೇ ಹೊಂದುವನು. ರಾಮಚಂದ್ರನ ದುರಹಂಕಾರ ಅವನ ವೃತ್ತಿ ಹಾಗೂ ಗೌರವಗಳಿಗೆ ಹಾನಿ ತಂದಾಗ ಅವನಿಂದ ಅವಮಾನಿತನಾಗಿದ್ದ ವೆಂಕಟೇಶ ತನ್ನ ಪ್ರತಿಜ್ಞೆಯನ್ನು (ಪು ೧೯೦ ಮರೆತು ಅವನ ನೆರವಿಗೆ ಧಾವಿಸುವನು. ತನ್ನ ತಪ್ಪನ್ನು ಕ್ಷಮಿಸುವಂತೆ ರಾಮಚಂದ್ರ ತಂಗಿಯಲ್ಲಿ ಪ್ರಾರ್ಥಿಸುವನು, ಲಕ್ಷ್ಮಣನಲ್ಲೂ ಕ್ಷಮೆ ಬೇಡುವನು.

ಇದೇ ರಾಮ ಲಕ್ಷ್ಮಣರು ನಮ್ಮಲ್ಲೂ ಇದ್ದಾರೆ. ಸಂಧ್ಯಾರಾಗ ಕಾದಂಬರಿ ಓದಿದ್ದ ಹಲವು ಜನ ಬದಲಾದ ಉದಾಹರಣೆಗಳಿವೆ. ಅ.ನ.ಕೃ ರವರ ಸಾಹಿತ್ಯಕ್ಕೆ ಅಷ್ಟು ಶಕ್ತಿ ಇದೆ.

'ಜೀವನ ಯಾತ್ರೆ' ಯಂತಹ ಸಾಧಾರಣ ಕಾದಂಬರಿಯಲ್ಲಿ ಅ.ನ.ಕೃ ಕೆಲವೇ ತಿಂಗಳ ಅಂತರದಲ್ಲಿ 'ಸಂಧ್ಯಾರಾಗ' ಬರೆದು ತಮ್ಮ ಅಸಮಾನ್ಯ ಪ್ರತಿಭೆಯನ್ನು ಪ್ರಕಟಿಸಿದ್ದು ಒಂದು ದಾಖಲೆ. ಇಂದಿಗೂ ಅವರ ಕಾದಂಬರಿಗಳೆಲ್ಲಾ ಶ್ರೇಷ್ಠವೆನ್ನುವ ಹೆಗ್ಗಳಿಕೆಯನ್ನು 'ಸಂಧ್ಯಾರಾಗ' ಪಡೆದಿರುವುದಕ್ಕೆ ಕಾರಣ ಅವರ ನೈಜ ನಿರೂಪಣೆ ಹಾಗೂ ಅದರ ಕಲಾತ್ಮಕ ಅನನ್ಯತೆ. 'ಸಂಧ್ಯಾರಾಗ'ದ ಮೂಲಕ ಕಲಾವಿದರ ಬದುಕು, ಬವಣೆ, ಕೊಡುಗೆಗಳನ್ನು ಚಿತ್ರಿಸುವ ಒಂದು ಮಾಲಿಕೆಯನ್ನೇ ಅ.ನ.ಕೃ ಪ್ರಾರಂಭಿಸಿದರು.

---

**ಅಡಿಟಿಪ್ಪಣಿ**

1. ಅ.ನ. ಕೃಷ್ಣರಾಯ-ಸಂಧ್ಯಾರಾಗ(ಪು.ಸಂ.೨೯)

2. ಅದೇ (ಪು.ಸಂ. ೧೧೫)

## ಹಂಸಗೀತೆ ಕಾದಂಬರಿಯ ಕಥಾವಸ್ತು:-

ಸಂಗೀತ, ನೃತ್ಯ, ಚಿತ್ರಕಲೆಗಳ ಬಗೆಗೆ ಅಪರಿಮಿತ ಗೌರವ ಭಾವವನ್ನು ಹೊಂದಿದ್ದ ತ.ರಾಸು ತಮ್ಮ ಕಾದಂಬರಿಗಳಲ್ಲಿ ಕಲೆಗೆ ಹೆಚ್ಚಿನ ಮಹತ್ವವನ್ನು ನೀಡಿದ್ದಾರೆ. ಲೇಖಕರ ಸ್ವಾನುಭವ ಅದಕ್ಕೆ ಮತ್ತಷ್ಟು ಮೆರಗನ್ನು ತಂದುಕೊಟ್ಟಿದೆ. ಕಲೆಗೆ ಒತ್ತುಕೊಟ್ಟ ಕಾದಂಬರಿಗಳಲ್ಲಿ ಹಂಸಗೀತೆಯು ಪ್ರಮುಖವಾದ ಕಾದಂಬರಿಯಾಗಿದೆ. ಸಾಮಾಜಿಕ ಕಥಾ ಹಂದರವುಳ್ಳ ಕಾಲ್ಪನಿಕ ಕೃತಿ. ಇತಿಹಾಸಕ್ಕೆ ಸಂಬಂಧಿಸಿದ ಚಿತ್ರದುರ್ಗದ ಕೆಲವು ಘಟನೆಗಳು ಕೃತಿಯಲ್ಲಿದ್ದರೂ ಐತಿಹಾಸಿಕ ಕಾದಂಬರಿ ಅಲ್ಲ. ಚಿತ್ರದುರ್ಗದ ವಿವರಗಳನ್ನು ನೀಡುತ್ತಲೇ ಸಂಗೀತಗಾರನ ಜೀವನ ಮತ್ತು ಸಾಧನೆಯನ್ನು ಚಿತ್ರಿಸುತ್ತಾರೆ. ಆತನ ಬದುಕಿಗೆ ಸವಾಲಾದ ಪಾತ್ರಗಳ ಚಿತ್ರಣವೂ ಕೇಂದ್ರ ಪಾತ್ರದೊಂದಿಗೆ ಮೂಡಿಬಂದಿದೆ.

ಕಾದಂಬರಿಯ ಮುನ್ನುಡಿಯಲ್ಲಿ ಕಾದಂಬರಿಕಾರನೇ ಸಂಗೀತಗಾರನೊಬ್ಬನ ಬಾಳಿನ ಹಂದರದ ಮೇಲೆ ಹಿಂದಿನ ಮತ್ತು ಇಂದಿನ ಸಂಸ್ಕೃತಿಯನ್ನು ನಾನಿಲ್ಲಿ ಚಿತ್ರಿಸಿ ತಿಳಿಸಿದ್ದೇನೆಂದು ಲೇಖಕರು ಹೇಳಿದ್ದಾರೆ. ಕಾದಂಬರಿಯ ಲೇಖನದಲ್ಲಿ ಬಳಸಿರುವ ತಂತ್ರಕ್ಕೆ ಅದು ಕಾರಣ. ಇದರಲ್ಲಿ ಬರುವ ಎಲ್ಲಾ ಪಾತ್ರಗಳೂ ಕಲ್ಪನಾ ಸೃಷ್ಠಿ. ಯಾವ ಸಾಕ್ಷಾತ್ಕಾರ, ರಾಗವನ್ನು ಒತ್ತೆ ಇಡುವುದು, ಹೂವಿನಿಂದ ಪಾಠ ಕಲಿಯುವುದು, ಇವು ನಾನು ಹೇಳಿದ ಹಿರಿಯ ಕಥೆಗಳಿಂದ ಪ್ರೇರಿತ ಎಂಬುದಾಗಿ ಹೇಳಿದ್ದಾರೆ.

'ಹಂಸಗೀತೆ'ಯ ಪಾತ್ರಗಳು ಕಲ್ಪನಾ ಸೃಷ್ಠಿ ಎಂಬುದಾಗಿ ಕಾದಂಬರಿಕಾರನೇ ಹೇಳಿರುವುದರಿಂದ ಇದೊಂದು ಐತಿಹಾಸಿಕ ಕಾದಂಬರಿ ಅಲ್ಲ ಎಂಬುದು ವಿದಿತ. ಚಿತ್ರದುರ್ಗದ ಕೋಟೆಯ ಚಿತ್ರಣ ಹಾಗೂ ಟಿಪ್ಪು ಸುಲ್ತಾನನ ಪಾತ್ರದ ಇದೊಂದು ಐತಿಹಾಸಿಕ ಕಾದಂಬರಿ ಇರಬಹುದೇನೋ ಎಂಬ ಭ್ರಮೆಯನ್ನು ಹುಟ್ಟಿಸುತ್ತದೆ. ಆದರೆ ಕಥೆ ಪ್ರಾರಂಭವಾಗುವುದು ಹಾಗೂ ಬೆಳೆಯುವುದು ಸಾಮಾಜಿಕ ಪರಿಸರದಲ್ಲಿಯೇ ಹೊರತು ಐತಿಹಾಸಿಕ ವಾತಾವರಣದಲ್ಲಲ್ಲ ಎಂದು ತ.ರಾ.ಸು ಅವರೇ ಹೇಳಿದ್ದಾರೆ. ಇತಿಹಾಸದಲ್ಲಿ ಆಶಕ್ತಿಯುಳ್ಳ ರಾಯರಿಗೆ ಹಳೆಯ ಕಡತದಲ್ಲಿ ದೊರೆತ ಪತ್ರದ ತುಣುಕೊಂದು ವೆಂಕಟಸುಬ್ಬಯ್ಯನ ಬದುಕಿನ ಅನ್ವೇಷಣೆ ಪ್ರೇರಣೆಯಾಗುತ್ತದೆ. ನಿರೂಪಕನೇ ಅನ್ವೇಷಕನಾಗುತ್ತಾನೆ. ಹಲವಾರು ಪಾತ್ರಗಳು ವೆಂಕಟಸುಬ್ಬಯ್ಯನ ಕಥೆಯನ್ನು ಹೇಳಿದರೂ ಕಥೆ ಕೇಳುವ ವ್ಯಕ್ತಿ ಒಬ್ಬನೇ.

ಲಿಂಗಾಜೋಯಿಸರು, ಮುರುಗೇಂದ್ರಪ್ಪನವರು, ಗೋಪಾಲಚಾರ್ರು, ಕುರುಮುರುಡಿಚೆನ್ನಪ್ಪ, ಪುಟ್ಟತಾಯಮ್ಮ, ತೊರೆಯೂರು ಗೋವಿಂದಯ್ಯ ಮೊದಲಾದದವರು ವೆಂಕಟಸುಬ್ಬಯ್ಯನ ಬದುಕಿನ ಪುಟಗಳನ್ನು ತೆರೆಯುತ್ತಾ ಹೋಗುತ್ತಾರೆ. ವಿವಿಧ ಸಾಮಾಜಿಕ ಸ್ತರಗಳಲ್ಲಿ ಬದುಕುವ ಇವರೆಲ್ಲರೂ ಸಂಸ್ಕೃತ ಭೂಯಿಷ್ಠ ಶೈಲಿಯಲ್ಲಿ, ಸ್ವಚ್ಛ ಕನ್ನಡದಲ್ಲಿ ಕಥೆಯನ್ನು ಹೇಳುವುದು ವಿಪರ್ಯಾಸವಾಗಿದೆ. ಈ ಕಾದಂಬರಿಯ ವೈಶಿಷ್ಟವೆಂದರೆ ತಮ್ಮ ಅಸ್ಥಿತ್ವವನ್ನು ನೆನಪಿಸುವ ಹೇಳುಗ, ಕೇಳುಗರಿಬ್ಬರಿಗೂ ಮರೆಯಾಗಿ ಪಾತ್ರಗಳು ಮಾತ್ರ ಅಚ್ಚಳಿಯದ ಪ್ರಭಾವವನ್ನು ಬೀರುತ್ತವೆ. ಇದು ಕಾದಂಬರಿಕಾರನ ಸಶಕ್ತ ಬವಣೆಯ ದ್ಯೋತಕವಾಗಿದೆ.

ಈ ಕಾದಂಬರಿಯ ಕೇಂದ್ರವ್ಯಕ್ತಿ ವೆಂಕಟಸುಬ್ಬಯ್ಯ. ಆತನ ಅಳಿವು– ಉಳಿವು ಎಲ್ಲವೂ ತೀರ್ಮಾನವಾಗುವುದು ಮಾವ ಅನಂತಯ್ಯನಿಂದಲೇ. ವೆಂಕಟಸುಬ್ಬಯ್ಯನಲ್ಲಿದ್ದ ಸಂಗೀತದ ಆಸಕ್ತಿಯನ್ನು ಮತ್ತಷ್ಟು ಹೆಚ್ಚಾಗುವಂತೆ ಮಾಡಿದರು. ಇವನ ಸಂಗೀತ ಆಸಕ್ತಿ ಸ್ವಾಭಾವಿಕವೂ, ದೈವದತ್ತವೂ ಆದುದು. ವೆಂಕಟಸುಬ್ಬಯ್ಯನ ನಾದಮೋಹವನ್ನು ಗುರುತಿಸಿ ಮಾರ್ಗದರ್ಶನವನ್ನು ನೀಡುವವರು ಕಸ್ತೂರಿ ರಂಗಾಚಾರ್ಯರು.

ವೆಂಕಟಸುಬ್ಬಯ್ಯನ ಗುರುವಾದ ತಿರುಮಲಯ್ಯ ಅಹಂಕಾರದಿಂದ ಬೀಗುವವನು. ನಡೆಯುತ್ತಿದ್ದ ಸಂಗೀತ ಕಛೇರಿಗಳನ್ನೆಲ್ಲಾ ಅಲ್ಲಗಳೆಯುವುದು, ಅಹಂಕಾರದ ಭಾವನೆ ತಿರುಮಲಯ್ಯನ ಮಾತಿಗೆ ಸಮ್ಮತಿಸುವ ಶಿಷ್ಯರು ಸಜ್ಜನಿಕೆಯಿಲ್ಲದ ಗುರು ಶಿಷ್ಯ ಸಂಬಂಧವಾಗುತ್ತದೆ. ಗುರುವಿನ ಅಹಂಕಾರದ ಮಾತುಗಳನ್ನು ವಿರೋಧಿಸಿ ವೆಂಕಟಸುಬ್ಬಯ್ಯ ಅಲ್ಲಗಳೆಯುತ್ತಾ ಹೋಗುವವನು. ಇವನ ಮಾತಿನಿಂದ ಕೋಪಗೊಂಡ ತಿರುಮಲಯ್ಯ ತನ್ನ ಶಿಷ್ಯನಾದ ವೆಂಕಟಸುಬ್ಬಯ್ಯನಿಗೆ 1"ಯೋಗ್ಯತೆ ಇದ್ದರೆ ಹಾಡಿ ತೋರಿಸಿ ಹತ್ತು ಜನ ಒಪ್ಪಿಕೊಳ್ಳಲಿ ಎಂದು ಹೇಳಿದರು. ಜೊತೆಗೆ ನನಗಿಂತ ಚೆನ್ನಾಗಿ ಹಾಡಿ ತೋರಿಸು ಇಲ್ಲದಿದ್ದರೆ, ನಾನು ಜಾತಿ ಬ್ರಾಹ್ಮಣನಲ್ಲ1" ಎಂದು ಹೀನಾಯವಾದ ಮಾತುಗಳಲ್ಲಿ ನಿಂದಿಸಿದರು. ಅನಿರೀಕ್ಷಿತವಾಗಿ ಏರ್ಪಡುವ ಸಂಗೀತ ಸ್ಪರ್ಧೆಯಲ್ಲಿ ವೆಂಕಟಸುಬ್ಬಯ್ಯ ಕಲ್ಯಾಣಿರಾಗವನ್ನು ತಿರುಮಲಯ್ಯನಿಗಿಂತ ತುಂಬಾ ಸೊಗಸಾಗಿ ಹಾಡುವವನು. ಮರ್ಯಾದಗೆ ಹೆದರಿ ಅವಮಾನಿತವಾದ ತಿರುಮಲಯ್ಯ ಸಾಯುವನು. ತನ್ನ ಗುರುವಿನ ಸಾವು ವೆಂಕಟಸುಬ್ಬಯ್ಯನ ತಂದೆ ತಾಯಗಳಿಗೆ ದುಃಖವನ್ನುಂಟು ಮಾಡಿತು. ಗುರುವನ್ನು ಕಳೆದುಕೊಂಡ ಸಂಗತಿ ಸಂತಸಕ್ಕಿಂತ ಹೆಚ್ಚು ನೋವಿನ ಸಂಗತಿಯೇ ಆಗುತ್ತದೆ.

ಪಶ್ಚಾತ್ತಾಪನಾದ ಅವನ ಸಂಗೀತದ ಆಕಾಂಕ್ಷೆಯನ್ನು ಉದ್ದೀಸಿಸುವವನು ಮಾವ ಅನಂತಯ್ಯ. ಗುರುವಿನ ಸಾವಿಗೆ ಕಾರಣನಾದ ವೆಂಕಟಸುಬ್ಬಯ್ಯನಿಗೆ ಬೇರೆ ಗುರು ಯಾರು ಸಿಗದೆ ಇದ್ದುದರಿಂದ ಚಿಂತಗೆ ಒಳಗಾಗುವನು. ಇವನ ಮನಸ್ಸಿನಲ್ಲಿದ್ದ ಆತಂಕ ಭಯ, ಎಲ್ಲವನ್ನು ಹೋಗಲಾಡಿಸಿ ಧೈರ್ಯ ಹೇಳುವರು. ನೀನೆ ಇನ್ನೂ ಮುಂದೆ ಗುರುವನ್ನು ಹುಡುಕಿಕೊಂಡು ಸಂಗಿತದ ಸಾಧನೆಯನ್ನು ಮಾಡು ಎಂದು ಹೇಳಿದರು. ಹೀಗೆ ಚಿಂತೆಯಿಂದ ಕೂಡಿದ ವೆಂಕಟ ಸುಬ್ಬಯ್ಯನಿಗೆ ಎಲ್ಲಿಂದಲೋ ಸುಳಿದುಬಂದ ಮಧುರವಾದ ರಾಗವನ್ನು ಕೇಳಿ ಅದನ್ನೇ ಹಿಂಬಾಲಿಸುವನು. ಮನೆಯನ್ನು ಬಿಟ್ಟು ಕಾಡಿನಲ್ಲಿ ಹುಚ್ಚನಂತೆ ಅವನ ಹಿಂದೆ ಅಲೆಯುವನು. ಇವನಲ್ಲಿದ್ದ ಸಂಗೀತಾಸಕ್ತಿಯನ್ನು ಗುರುತಿಸಿ ಆ ವ್ಯಕ್ತಿ ತನಗೆ ಗೊತ್ತಿದ್ದ ಅಪೂರ್ವವಾದ ಭೈರವಿ ರಾಗವನ್ನು ಹೇಳಿಕೊಡುವನು. ಈತನ ಹೆಸರು ಸದಾನಂದ ಬುವಾ. ವೆಂಕಟಸುಬ್ಬಯ್ಯನಿಗೆ ಸಂಗೀತದ ರಾಗಗಳನ್ನು ಧಾರೆ ಎರೆದು ಪ್ರಾಣ ನೀಗುವನು. 'ರಾಗವು ಒಂದು ದೇವತೆ, ಯಾವುದನ್ನಾದರೂ ಒಂದು ರಾಗ ದೇವತೆಯನ್ನು ಒಲಿಸಿಕೊಳ್ಳುವವರೆಗೂ ಸಂಗೀತಗಾರನ ಬಾಳು ಪೂರ್ಣವಲ್ಲ' ಎಂದು ಬುವಾ ಹೇಳಿದುದು, ನಿಶ್ಯಬ್ಧ ನಿಶೆಯಲ್ಲಿ ಬಹು ಸ್ಪಷ್ಟವಾಗಿ ಕೇಳಿ ಬರುವ ಘಂಟಾನಾದದಂತೆ ಕೇಳಿಸಿತು. ಹಾಗೆ ಯೋಚಿಸಿದ. 'ನಿಜ. ಕೀರ್ತಿಯ ಮೋಹದಲ್ಲಿ ಕುರುಡಾಗಿ ಅವಿವೇಕಿಯಾಗಿದ್ದೆ. ಸುಮ್ಮನೆ ಬಾಳು ವ್ಯರ್ಥ ಮಾಡಿದೆನಲ್ಲಾ' ಎನಿಸಿತು. ಕೂಡಲೆ ಸ್ವಾಮಿಗಳ ಕಾಲಿಗೆ ಬಿದ್ದು ಹೇಳಿದ: "ಅಜ್ಞಾನದಲ್ಲಿ ಅಂಧನಾಗಿದ್ದ ನನಗೆ ಬೆಳಕಾಗಿ ಬಂದು ದಾರಿ ತೋರಿದಿರಿ, ಗುರುದೇವಾ". "ಇನ್ನು ಜ್ಞಾನಿಯಾಗಿ ಬಾಳು, ಕೀರ್ತಿಗಲ್ಲ ಸಂಗೀತಕ್ಕೆ ನಿನ್ನ ಬಾಳು ಮೀಸಲಾಗಲಿ".

*೨ ನೋಡು, ನಿನ್ನ ಕಲೆ ದೈವದತ್ತವಾದುದು. ಕಡಲ ಜಗದಲ್ಲಿ ಹುಟ್ಟಿದ ಮೋಡ ಮಳೆಯಾಗಿ ನದಿಯಾಗಿ ಲೋಕಕ್ಕೆ ತಂಪು ನೀಡಿ, ಮತ್ತೆ ಹೇಗೆ ಕಡಲನ್ನು ಸೇರುವುದೋ, ಕಲಾವಿದನ ಬಾಳು ಹಾಗೆ ಆಗಬೇಕು. ದೈವಾನುಗ್ರಹದಿಂದ ಅರಳಿದ ಪ್ರತಿಭಾಪುಷ್ಪ, ದೈವಾನುಗ್ರಹಕಾತರವಾಗಿ ಮಾರ್ಗಮಧ್ಯದಲ್ಲಿ ಆದಷ್ಟು ದೈವಸೃಷ್ಟಿಯ ಸೇವೆ ಮಾಡಿ ಕೊನೆಗೆ ದಿವ್ಯ ಪಾದಗಳಲ್ಲಿ ಲೀನವಾಗಬೇಕು. ದೈವೀಕೃಪೆಯ ಮಂತ್ರದಂಡ ತನ್ನಾವುದೋ ಕಾರ್ಯಕ್ಕಾಗಿ ಅರಳಿದ ಹೂವು ಜನತೆಗೆ ನೀಡುವ ತನ್ನ ಪರಿಮಳಕ್ಕೆ ಸುಂಕ ಕೇಳುತ್ತದೆಯೇ? ಹಾಗೆಯೇ ನೀನು; ಹೂವಾಗಿ ಅರಳು. ಯಾರು ಪರಿಮಳ ಹೀರಬೇಕೆಂದರೂ ಅಡ್ಡಬರಬೇಡ. ಸೂರ್ಯ ಕಾಸು ಕೊಟ್ಟವನಿಗೆ ಬೆಳಕು ಕೊಡುತ್ತೇನೆ ಎನ್ನುತ್ತಾನೆಯೇ? ಹಾಗೆ ನಿನ್ನ ಕಲೆ ಸೂರ್ಯಕಾಂತಿಯಲ್ಲಿ; ಮಾರಿಗೆಯ ದೀಪವಾಗದಿರಲಿ. ಅಣತೆಯ ಕುಡಿಯಿಂದ ಸೂರ್ಯನಾಗುವ ಶಕ್ತಿ ಸಾಧಿಸು *೨ ಎಂದು ಬುವಾ ಹೇಳಿದ ಮಾತು ಇಷ್ಟು ದಿನ ಆತನಿಗೆ ಅದು ಮರೆತು ಹೋಗಿತ್ತು. ಈಗ ವೆಂಕಟಸುಬ್ಬಯ್ಯ ತುಂಬಾ

ಹೆಸರುವಾಸಿಯಾಗಿದ್ದ ದೊಡ್ಡ ಸಂಗೀತಗಾರನಾಗಿದ್ದನು.

ಸದಾನಂದ ಬುವಾ ಇದರಿಂದ ಸಂಗೀತವನ್ನು ಕಲಿತು ಚಿತ್ರದುರ್ಗದ ಆಸ್ಥಾನದಲ್ಲಿದ್ದ ವಿದ್ವಾಂಸನಾಗುವನು. ವೆಂಕಟಸುಬ್ಬಯ್ಯ ತನ್ನ ಗುರುವಾಗಿದ್ದ ತಿರುಮಲಯ್ಯನಂತೆ ಅಹಂಕಾರದಿಂದಾಗಿ ಬೀಗುವನು. ಚಿತ್ರದುರ್ಗಕ್ಕೆ ಆಗಮಿಸಿದ ತಾಂಡವೇಶ್ವರನ ಉಪಾಸಕರು ಇವನ ಸಂಗೀತವನ್ನು ಕೇಳಬೇಕೆಂಬ ಆಸೆಯಿಂದ ಕಛೇರಿಯನ್ನು ಪಟ್ಟಶೆಟ್ಟರ ಮನೆಯಲ್ಲಿ ಏರ್ಪಡಿಸುವರು. ಅವರ ಶಿಷ್ಯನ ಮದ್ದಲೆಯ ತಾಳಕ್ಕೆ ಶೃತಿ ತಪ್ಪಿ ಅವಮಾನಿತನಾದ ವೆಂಕಟಸುಬ್ಬಯ್ಯ ಸಾಯುವ ನಿರ್ಧಾರ ಮಾಡಿ ಸ್ವಾಮಿಜಿಯಿಂದ ಉಳಿಯುತ್ತಾನೆ. ಮೇಲಿನ ಎರಡೂ ಪ್ರಸಂಗಗಳಲ್ಲೂ ಅಹಂಕಾರದಿಂದ ಉಂಟಾಗುವ ಸೋಲು, ಮರ್ಯಾದೆಗೆ ಹೆದರಿ ಸಾಯುವ ನಿರ್ಧಾರ ತೆಗೆದುಕೊಳ್ಳುವ ಮಾನವ ದೌರ್ಬಲ್ಯವನ್ನು ಕಾಣಬಹುದು. ವೆಂಕಟಸುಬ್ಬಯ್ಯ ಚಂದ್ರಸಾನಿಯ ಸಾಮೀಪ್ಯಕ್ಕಾಗಿ ರಾಗವನ್ನು ಒತ್ತೆಯಿಡುತ್ತಾನೆ. ವೆಂಕಟಸುಬ್ಬಯ್ಯನನ್ನು ಪತಿ ಎಂದು ಭಾವಿಸುವ ಚಂದ್ರಸಾನಿ ಅನಂತಯ್ಯನ ಕೋರಿಕೆಗೆ ಬೆಲೆಕೊಡುತ್ತಾರೆ. ವೇಶ್ಯೆಯಾದರೂ ತನು ಸತ್ತು ವೆಂಕಟಸುಬ್ಬಯ್ಯನ ಆತ್ಮೋನ್ನತಿಗೆ ಕಾರಣಳಾಗುತ್ತಾಳೆ. ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿಯುವ ಉದಾತ್ತ ಗುಣ ಅವಳಲ್ಲಿ ಕಂಡು ಬರುತ್ತದೆ. ಚಂದ್ರಸಾನಿಯ ಸಾವಿನಿಂದ ಕಂಗಲಾಗಿದ್ದ ವೆಂಕಟಸುಬ್ಬನಿಗೆ ಕನ್ನಡಿಯಲ್ಲಿ ತನ್ನ ಪ್ರತಿಬಿಂಬ ನೋಡಿ ಇದ್ದಕಿದ್ದಹಾಗೆ ಅವರ ವಿಚಾರ ಊಹೆಗೂ ನಿಲುಕದ ಯಾವುದೋ ದಾರಿಯಲ್ಲಿ ಹರಿಯತೊಡಗಿತು.

*೩"ಎರಡು ಕನ್ನಡಿಯಲ್ಲಿ ಎರಡು ಪ್ರತಿಬಿಂಬ! ಹತ್ತು ಕನ್ನಡಿಗಳಿದ್ದರೆ ಹತ್ತರಲ್ಲೂ ಕಾಣುತ್ತಿತ್ತು. ತಾವು ಇರುವುದೊಬ್ಬರು, ಆದರೆ ಕನ್ನಡಿಯಲ್ಲಿ ಹತ್ತಾಗಿ ಕಾಣುತ್ತಾರೆ. ಈ ಹತ್ತರ ಮೂಲವೂ ಒಂದೇ. ನೋಡುವ ಕಣ್ಣಿಗೆ ಜಗತ್ತಿನಲ್ಲಿ ಕೋಟ್ಯಾನುಕೋಟಿ ಪ್ರತ್ಯೇಕ ಸ್ವರೂಪವಾಗಿ ಕಾಣುವುದೆಲ್ಲವೂ ಒಂದೇ ಶಕ್ತಿಯ ಬಹು ಪ್ರತಿಬಿಂಬ" ಹಾಗೆಯೇ– ಎಲ್ಲಾ ಬಗೆಯ ಪ್ರೇಮವು ಒಂದೇ ಬಗೆಯ ಪ್ರೇಮದ ಬಹು ರೂಪಿಯಾದ ಪ್ರತಿಬಿಂಬವೇ? ಇದು ಸರಿ ಎಂದರೆ ಅದೂ ಹಾಗೇ ಇರಬಾರದೇಕೆ?– ಹೀಗೆ ಚಿಂತಿಸುತ್ತಾ ಚಿಂತಿಸುತ್ತಾ ಎಲ್ಲೆಡೆಯಲ್ಲೂ ಒಂದೇ, ಏಕಮೇವಾದ್ವಿತೀಯವಾದ ಸತ್ಯ ಗೋಚರಿಸಿತು. ಆ ಮಾತು ಅರಿವಾಗಿ, ನೆಲದಲ್ಲಿ ತೆವಳುತ್ತಿದ್ದ ಮೇಲೇರಲು ಅವರಿಗೆ ಏಣಿ ಸಿಕ್ಕಂತಾಯಿತು. ಅಂದು ಅವರಿಗೆ ಬುವಾ ಹೇಳಿದ ಮಾತು ನೆನಪಾಯಿತು. 'ಪ್ರಣವಸ್ವರೂಪವಾದ ಭಗವಂತನನ್ನು ನಾದೋಪಾಸನೆಯಿಂದ ಸಾಧಿಸಬಹುದು'. ಆ ಮಾತು ನೆನಪಾಗಿ ಅವರು ತೆವಳುತ್ತಿದ್ದ ಕಿರುದಾರಿ ಹಿರಿದಾಗಿ, ರಾಜಮಾರ್ಗವಾಗಿ ಅವರ ಸಾಧನೆಯಲ್ಲಿ ಹೊಸ ವೇಗ ಮೂಡಿತು.

*೩ ವೆಂಕಟ ಸುಬ್ಬಯ್ಯನ ಸಂಗೀತವನ್ನು ದುರ್ಗದ ಪಾಳಯಗಾರರಾದ ಟಿಪ್ಪುವಿನ ರಾಣಿಗೆ ಕೇಳಬೇಕೆಂಬ ಆಸೆ ಹುಟ್ಟುತ್ತದೆ. ಅದಕ್ಕಾಗಿ ಟಿಪ್ಪು ವೆಂಕಟಸುಬ್ಬಯ್ಯನ ಬಳಿ ಕೇಳುವನು. ಆದರೆ ವೆಂಕಟಸುಬ್ಬಯ್ಯ ದೇವರ ಗುಡಿಯಲ್ಲಿ ಹಾಡುವೆನು ಅಲ್ಲಿಗೆ ಬಂದು ಕೇಳಿಸಿಕೊಳ್ಳಿ ಎಂದು ಉತ್ತರ ನೀಡಿದನು. ಟಿಪ್ಪುವಿನ ಮಾತಿಗೆ ವಿರುದ್ಧವಾಗಿ ನಡೆದುಕೊಳ್ಳುವುದು ಇಷ್ಟವಾಗದ ವಿಷಯವಾಗಿತ್ತು. ವೆಂಕಟಸುಬ್ಬಯ್ಯ ಹಾಡದೆ ಇರಲು ಕಾರಣ ಟಿಪ್ಪುವಿನ ಆಳ್ವಿಕೆಗಿಂತ ಹಿಂದೆ ಮದಕರಿನಾಯಕರ ಕಾಲದಲ್ಲಿ ಹಿಡಿಂಬೇಶ್ವರನ ದೇವಲಯದಲ್ಲಿ ಪೂಜೆ ಮಾಡಿಕೊಂಡಿದ್ದ ವೀರಣ್ಣಜ್ಜನ ಸಾವಿಗೆ ಪಾಳೆಗಾರರು ಕಾರಣರಾಗಿದ್ದರು. ಇದರಿಂದ ದುಃಖಿತನಾದ ವೆಂಕಟಸುಬ್ಬಯ್ಯ ಪಾಳೆಗಾರರ ಎದುರಿನಲ್ಲಿ ಹಾಡುವುದನ್ನೇ ನಿಲ್ಲಿಸಿದ. ಹಾಡುವುದಾದರೆ ತಾಯಿಗಾಗಿ ಹಾಡುತ್ತೇನೆ ಎಂಬ ಪ್ರತಿಜ್ಞೆಯನ್ನು ಮಾಡಿದನು. ಈ ಕಾರಣದಿಂದಾಲೇ ವೆಂಕಟಸುಬ್ಬಯ್ಯ ಪಾಳೆಗಾರರ ಮಾತನ್ನು ತಿರಸ್ಕರಿಸಿದರು. ಹಿಡಿಂಬೇಶ್ವರ ದೇವಾಲಯದಲ್ಲಿ ಕೊನೆಯದಾಗಿ ಹಾಡಿ ತನ್ನ ನಾಲಿಗೆಯನ್ನು ಕತ್ತರಿಸಿಕೊಳ್ಳುವರು. ಇವನ ನೆನಪಿಗಾಗಿ ಪಾಳೆಗಾರು ಇವನ ಚಿತ್ರವನ್ನು ಬಿಡಿಸಿದ್ದರು. ವೆಂಕಟಸುಬ್ಬಯ್ಯನಿಗೆ ಸಂಗೀತದ ವಿಚಾರಗಳನ್ನು ಬೋಧಿಸುವ ಬುವಾ ಪ್ರಬುದ್ಧತೆಯ ಸಂಕೇತವಾಗುತ್ತಾನೆ.

ತಲೆಹೊಯಿಕ ವೀರಣ್ಣಜ್ಜ ಪ್ರಸಂಗ, ಭೈರವಿ ವೆಂಕಟಸುಬ್ಬಯ್ಯ ತನ್ನ ನಾಲಿಗೆಯನ್ನು ಕತ್ತರಿಸಿಕೊಳ್ಳುವುದು ರಾಜನನ್ನು ಪ್ರತಿಭಟಿಸುವ ರೀತೀಯೇ ಆಗಿದೆ. ಈ ಎರಡೂ ಸಂದರ್ಭಗಳಲ್ಲಿ ನಿಷ್ಠಾವಂತ ಭಕ್ತನ ದರ್ಶನವಾಗುತ್ತದೆ. ಇಬ್ಬರು ದೈವ ದರ್ಶನ ಪಡೆಯಬಲ್ಲ ಆತ್ಮಸ್ಥೈರ್ಯವುಳ್ಳ ಸಾಧಕರು. ದೈವ ನಿಷ್ಠೆ ಮತ್ತು ವ್ಯಕ್ತಿ ನಿಷ್ಠೆಗಳ ಪ್ರತೀಕವಾಗುತ್ತಾರೆ. ದೇವಿಯ ತಲೆಯಲ್ಲಿ ಕೂದಲು ಕಾಣಿಸಿಕೊಂಡಾಗ ವೀರಣ್ಣನಿಗೆ, ಭೈರವಿ ರಾಗವನ್ನು ಒಲಿಸಿಕೊಂಡಾಗ ವೆಂಕಟಸುಬ್ಬಯ್ಯನಿಗೆ ಆಗುವ ಸಂತೋಷವೇ ದೈವದ ಸಾಕ್ಷಾತ್ಕಾರದ ಸಾಧನೆಯೇ ಆಗಿದೆ.

ಹೀಗೆ ವೆಂಕಟಸುಬ್ಬಯ್ಯನ ಜೀವನ ಮತ್ತು ಸಾಧನೆಯನ್ನು ಹಂಸಗೀತೆ ಕಾದಂಬರಿಯ ಮೂಲಕ ಪರಿಪೂರ್ಣವಾಗಿ ಅರ್ಥೈಸಿಕೊಳ್ಳಬಹುದು. ಗುರುಶಿಷ್ಯರ ಸಂಬಂಧ, ಬುವಾ ರಾಗ–ತಾಳ–ಸ್ವರಗಳ ಬಗ್ಗೆ ಮಾಡುವ ವಿಸ್ತೃತ ಚರ್ಚೆ. ದೈವಾರಾಧನೆ ಹಾಗೂ ಸಾಧನೆಯಲ್ಲಿ ಪಡೆಯುವ ಯಶಸ್ಸು, ಗೌರವಯುತವಾಗಿ ಬಾಳುವ ವೇಶ್ಯ ಕೂಡ ಸಮಾಜದಲ್ಲಿ ಮನ್ನಣೆಗಳಿಸುವುದು, ಅವಳ ಸಾಮಿಪ್ಯಕ್ಕಾಗಿ ಒಡವೆಗಳನ್ನು ಒತ್ತೆಯಿಡುವಂತೆ ರಾಗವನ್ನೇ ಒತ್ತೆಯಿಡುವುದು, ಈ ಎಲ್ಲಾ ಸಂದರ್ಭಗಳ ನವುರಾದ ವಿವರಣೆ, ಭಾವ–ಭಾಷೆಗಳ ಜೀವಂತಿಕೆ ಕೃತಿಯ ಯಶಸ್ಸಿಗೆ ಮುಖ್ಯ ಕಾರಣವಾಗಿದೆ.

## ಅಡಿ ಟಿಪ್ಪಣಿ

೧. ತ.ರಾ.ಸು–ಹಂಸಗೀತೆ (ಪು.ಸಂ.೭೨)

೨. ಅದೇ (ಪು.ಸಂ.೧೨೫)

೩. ಅದೇ (ಪು.ಸಂ.೧೭೩)

# ಅಧ್ಯಾಯ – ೩

## ಎರಡೂ ಕಾದಂಬರಿಗಳ ಪಾತ್ರ ಮತ್ತು ಸನ್ನಿವೇಶ ಚಿತ್ರಣ

ಸಂಧ್ಯಾರಾಗ ಮತ್ತು ಹಂಸಗೀತೆ ಕಾದಂಬರಿಗಳಲ್ಲಿ ಕಂಡುಬರುವ ಪಾತ್ರಗಳು ಕಥಾ ನಿರೂಪಕನೊಂದಿಗೆ ಮಾತನಾಡುವಾಗ ಮತ್ತು ನಿರೂಪಕ ಕಥೆಯನ್ನು ನಿರೂಪಿಸುವಾಗ ಶುದ್ಧ ಗ್ರಾಮ್ಯ ಭಾಷೆಯಲ್ಲಿ ಮಾತನಾಡುತ್ತವೆ. ಕಥ ಬೆಳವಣಿಗೆಯ ಉದ್ದಕ್ಕೂ ಗಂಭೀರವಾದ ಶೈಲಿಯಿದ್ದು ಕಾದಂಬರಿಯ ಗಟ್ಟಿತನಕ್ಕೆ ಕಾರಣವಾಗಿದೆ.

ಈ ಎರಡು ಕಾದಂಬರಿಗಳಲ್ಲಿ ಸನ್ನಿವೇಶಕ್ಕೆ ಅನುಗುಣವಾಗಿ ಪಾತ್ರಗಳ ಚಿತ್ರಣ ಕಂಡುಬರುತ್ತದೆ. ಕಾದಂಬರಿಯಲ್ಲಿ ಕಥಾವಸ್ತು ಎಷ್ಟು ಮುಖ್ಯವಾಗುತ್ತದೆಯೋ, ಅಷ್ಟೇ ಕಾದಂಬರಿಯು ಬೆಳೆಯುವುದಕ್ಕೆ, ವಿಕಾಸವಾಗುವುದಕ್ಕೆ ಪಾತ್ರಗಳು ಕೂಡ ಅತೀ ಮುಖ್ಯವಾಗುತ್ತವೆ. ನಮ್ಮ ಕಣ್ಣಿಗೆ ಕಾಣುವ ಸಾಮಾನ್ಯ ವ್ಯಕ್ತಿಗಳು ಕಾದಂಬರಿಕಾರನಿಗೆ ವಿಶೇಷವಾದ, ಮಹತ್ವವಾದ ವ್ಯಕ್ತಿಗಳಾಗಿ ಕಂಡು ಬರುತ್ತಾರೆ.

ಪಾತ್ರಗಳ ಸೃಷ್ಠಿ ಕಾದಂಬರಿಯಿಂದ ಕಾದಂಬರಿ ಭಿನ್ನವಾಗಿರುತ್ತದೆ. ಪಾತ್ರಗಳ ದುರಂತ ಚಿತ್ರಣ ಮತ್ತು ಔದಾರ್ಯ ಓದುಗರ ಮನದಲ್ಲಿ ಬೇರು ಬಿಡುತ್ತದೆ. ಆಯಾ ಪಾತ್ರಗಳ ಸಂಭಾಷಣೆ ನಮ್ಮ ನಡುವೆ ನಡೆಯುತ್ತಿದ್ದಂತೆ ಭಾಸವಾಗುತ್ತದೆ.

ಈ ಎರಡು ಕಾದಂಬರಿಯಲ್ಲಿ ಕಂಡುಬರುವ ಸ್ತ್ರೀ ಪಾತ್ರಗಳಿಗಿಳತ ಭಿನ್ನವಾದ ರೀತಿಯಲ್ಲಿ ಪುರುಷ ಪಾತ್ರಗಳ ಚಿತ್ರಣವನ್ನು ನೋಡಬಹುದು.

**ಪುರುಷ ಪಾತ್ರಗಳು:–**

ಸಂಧ್ಯಾರಾಗ ಕಾದಂಬರಿಯಲ್ಲಿ ಮುಖ್ಯವಾಗಿ ಕಂಡುಬರುವ ಪಾತ್ರವೆಂದರೆ ಶ್ರೀನಿವಾಸರಾಯರು. ಇವರಿಗೆ ಕುಮಾರವ್ಯಾಸ ಭಾರತದ ಕರ್ಣವೃತ್ತಾಂತ ಅತ್ಯಂತ ಪ್ರಿಯವಾದ ಭಾಗ. ಕರ್ಣನ ವಿಷಾದಕರ ಉಜ್ವಲ ಚರಿತ್ರೆಯನ್ನು ಕಂಡು ಮರುಕವನ್ನು ವ್ಯಕ್ತಪಡಿಸುವರು. ಇವರು ಸುಸಂಸ್ಕೃತ ಬದುಕಿನ ಆದರ್ಶ ವ್ಯಕ್ತಿಯಾಗಿ ಈ ಕಾದಂಬರಿಯಲ್ಲಿ ಕಾಣಿಸಿಕೊಳ್ಳುತ್ತಾರೆ.

ಅದರಂತೆ ಹಂಸಗೀತೆ ಕಾದಂಬರಿಯಲ್ಲಿ ಕಂಡುಬರುವ ಪ್ರಮುಖವಾದ ಪಾತ್ರ ರಾಘವೇಂದ್ರರಾಯರು. ಇವರಿಗೆ ಇತಿಹಾಸದ ಮೇಲೆ ತುಂಬಾ ಉತ್ಸಾಹವುಳ್ಳವರಾಗಿದ್ದವರು. ಹಳೆಯ ದಾನಶಾಸನದ ನಕಲು ವೆಂಕಟಸುಬ್ಬಯ್ಯನ ಬದುಕಿನ ಅನ್ವೇಷಣೆಗೆ ಪ್ರೇರಣೆಯಾಗುತ್ತದೆ. ಈ ಎರಡು ಪಾತ್ರಗಳಿಂದ ಓದುಗನ ಮನಸ್ಸಿಗೆ ತುಂಬಾ ಪ್ರಭಾವ ಬೀರುತ್ತದೆ. ಏಕೆಂದರೆ ಇವರ ಆದರ್ಶದ ಬದುಕು ಓದುಗರಲ್ಲಿ ಅಚ್ಚಳಿಯದೆ ಮನಸ್ಸಿನಲ್ಲಿ ಉಳಿಯುವಂತೆ ಮಾಡುವ ಶಕ್ತಿ ಈ ಪಾತ್ರಗಳಿಗಿದೆ. ಈ ಪಾತ್ರಗಳನ್ನು ಕುರಿತು ಓದುವುದರಿಂದಲೇ ಓದುಗರಿಗೆ ಆದರ್ಶದ ಗುಣಗಳನ್ನು ಬೆಳೆಸಿಕೊಳ್ಳಲು ಸಾಧ್ಯವಾಗುತ್ತದೆ.

ಶಾಮಣ್ಣನವರು ಲಕ್ಷ್ಮಣನಿಗೆ ಸಂಗೀತದ ಮೇಲಿನ ಆಸಕ್ತಿಯನ್ನು ಮತ್ತಷ್ಟು ಉದ್ದೀಪನಗೊಳಿಸುಚುದಕ್ಕೆ ಮುಖ್ಯವಾಗಿ ಕಂಡು ಬರುತ್ತಾರೆ. ಇವರ ಉದಾರವಾದ ಮನಸ್ಸು ಓದುಗರಿಗೆ ಅರ್ಥವಾಗುತ್ತದೆ. ಎಷ್ಟೋ ವರ್ಷದಿಂದ ಇವರ ಬಳಿ ಇದ್ದ ತಂಬೂರಿಯನ್ನು ಉಡುಗೊರೆಯಾಗಿ ಮತ್ತು ನೆನಪಿಗಾಗಿ ಕೊಡುವ ಉದಾತ್ತ ಮನಸ್ಸು ಅವರದು.

ವೆಂಕಟಸುಬ್ಬಯ್ಯನ ಮಾವ ಅನಂತಯ್ಯ ಮುಖ್ಯವಾದ ಪಾತ್ರವಾಗಿ ಕಂಡುಬರುತ್ತಾರೆ. ಇವನ ಅಳಿವು –ಉಳಿವು ಎಲ್ಲರೂ ಇವರಿಂದಲೇ ತೀರ್ಮಾನವಾಗುತ್ತಿದ್ದವು. ಇವರ ಹಿತನುಡಿಗಳು ಪ್ರೀತಿ, ವಾತ್ಸಲ್ಯ ಮುಂತಾದವುಗಳು ಬಾಲ್ಯದಿಂದಲೇ ಈತನಿಗೆ ದೊರೆಯುತ್ತಿತ್ತು. ಇವನಲ್ಲಿದ್ದ ಸಂಗೀತದ ಆಸಕ್ತಿಯನ್ನು ಹೆಚ್ಚಿಸುವಲ್ಲಿ ಪ್ರಮುಖವಾದ ವ್ಯಕ್ತಿಯಾಗಿ ಕಂಡು ಬರುತ್ತಾರೆ. ಕುರುಮುರುಡಿ ಚೆನ್ನಪ್ಪ ಅನಂತಯ್ಯನ ಗುಣ ಸ್ವಭಾವವನ್ನು ಕುರಿತು ವಿಸ್ತಾರವಾಗಿ ನಿರೂಪಿಸುತ್ತಾರೆ.

ಅ.ನ.ಕೃ ಮತ್ತು ತ.ರಾ.ಸು ಅವರ ನಿರೂಪಣಾ ಶೈಲಿ ಜನ ಸಾಮಾನ್ಯರಿಗೆ ಸುಲಭವಾಗಿ ಅರ್ಥವಾಗುತ್ತದೆ. ಸತ್ವಪೂರ್ಣವಾದ ಭಾಷಾ ಬಳಕೆ ಭಾಷೆಯ ಪ್ರೌಢಿಮೆಯನ್ನು ಕಾಯ್ದುಕೊಳ್ಳುತ್ತವೆ. ತಂಜಾವೂರು ಕೃಷ್ಣಯ್ಯನವರಿಂದ ಲಕ್ಷ್ಮಣ ಕೆಲವು ಅಪೂರ್ವವಾದ ರಾಗಗಳನ್ನು ಕಲಿಯಲು ಸಾಧ್ಯವಾಗುತ್ತದೆ. ಇವರ ಸಂಗೀತದ ಅಭ್ಯಾಸದಿಂದಾಗಿ ದೊಡ್ಡ ಸಂಗೀತಗಾರನಾಗಿ ಬೆಳೆಯಲು ಸಾಧ್ಯವಾಗುತ್ತದೆ. ಪೂರ್ವಿರಾಗವನ್ನು ದತ್ತುವಾಗಿ ತೆಗೆದುಕೊಳ್ಳುವನು.

ವೆಂಕಟಸುಬ್ಬಯ್ಯ ಸದಾನಂದ ಬುವಾ ಎಂಬ ದೊಡ್ಡ ಸಂಗೀತಗಾರನಿಂದ ಸಂಗೀತವನ್ನು ಅಭ್ಯಾಸಮಾಡುವ ಭಾಗ್ಯ ಅವನಿಗೆ ಸಿಗುತ್ತದೆ. ಇದರಿಂದ ಭೈರವಿ ಕಲ್ಯಾಣಿ ರಾಗವನ್ನು ಧಾರೆ ಎರೆದು ಸಾವಿಗೀಡಾಗುವರು. ವೆಂಕಟಸುಬ್ಬಯ್ಯ ಸಂಗೀತವನ್ನು ಒಲಿಸಿಕೊಂಡು ಪಾಳೆಗಾರರ ಮನ್ನಣೆಗೆ ಒಳಗಾಗುವನು. ಇವೆಲ್ಲವನ್ನೂ ಕುರುಮುರುಡಿ ಚೆನ್ನಪ್ಪನವರು ಹೇಳುವರು. ಜೊತೆಗೆ ತೊರೆಯೂರು

ಗೋವಿಂದಯ್ಯನವರ ನಾಲಿಗೆಯನ್ನು ಕತ್ತರಿಸಿಕೊಂಡಿದ್ದ ವೆಂಕಟಸುಬ್ಬಯ್ಯನ ಕಥೆಯನ್ನು ಹೇಳುವರು. ಈ ಎರಡು ಪಾತ್ರಗಳಲ್ಲೂ ಸಂಗೀತಗಾರನ ಸಂಗೀತದ ಸಾಧನೆಗೆ ಕಾರಣವಾದ ವ್ಯಕ್ತಿಗಳ ಪರಿಚಯ ಓದುಗರಿಗೆ ಉಂಟಾಗುತ್ತದೆ. ಈ ಕಥೆಯಲ್ಲಿ ನಿರೂಪಕ ಹಾಗೂ ಕಥಾವಾಚಕ ಮರೆಯಾಗಿ ಕಥೆಯೊಂದು ಮಾತ್ರ ನಮ್ಮ ಕಣ್ಣು ಮುಂದೆ ಸುಳಿದಾಡುತ್ತದೆ. ಕಾದಂಬರಿಯಲ್ಲಿ ಕಾಣುವ ಸಂಭಾಷಣಾತಂತ್ರ ಕಾದಂಬರಿಗೆ ನಾಟಕೀಯತೆಯ ಸೊಗಸನ್ನು ತಂದುಕೊಟ್ಟಿದೆ.

**ಸ್ತ್ರೀ ಪಾತ್ರಗಳು:–**

ಪುರುಷ ಪಾತ್ರಗಳು ಎಷ್ಟು ಪ್ರಾಮುಖ್ಯತೆಯನ್ನು ವಹಿಸುತ್ತವೆಯೋ ಅಷ್ಟೇ ಪ್ರಾಮುಖ್ಯತೆಯನ್ನು ಸ್ತ್ರೀ ಪಾತ್ರಗಳು ವಹಿಸುತ್ತವೆ. ಸ್ತ್ರೀ ವರ್ಣನೆ ಬಂದಾಗಲಂತೂ ಕಾದಂಬರಿಕಾರನ ಶೈಲಿ ನಿರರ್ಗಳವಾಗಿ ಸಾಗುತ್ತದೆ. ಭಾವತೀವ್ರತೆಯನ್ನು ಉಂಟುಮಾಡುತ್ತದೆ. ಸ್ತ್ರೀಯ ಭಾವಚಿತ್ರ ಕಣ್ಮುಂದೆ ಸುಳಿಯುವಂತೆ ಚಿತ್ರಿಸುತ್ತಾ ಹೋಗುವರು.

ಸಂಧ್ಯಾರಾಗ ಕಾದಂಬರಿಯಲ್ಲಿ ಲಕ್ಷ್ಮಣನಿಗೆ ಮೀನಾಕ್ಷಮ್ಮ ಸಂಗೀತವನ್ನು ಕಲಿಯುವಂತೆ ಪ್ರೋತ್ಸಾಹ ನೀಡುವಳು. ಇವರ ಪ್ರೋತ್ಸಾಹದಿಂದಾಗಿ ಮನೆಯಲ್ಲಿಯೇ ಸಂಗೀತ ಕಲಿಯುವ ಅವಕಾಶ ದೊರೆಯುತ್ತದೆ. ಸತ್ಯ,ಧರ್ಮ, ನ್ಯಾಯ, ಔದಾರ್ಯ, ಮಾನವೀಯತೆ ಗುಣಗಳನ್ನು ಮೈಗೂಡಿಸಿಕೊಂಡು ಆದರ್ಶ ವ್ಯಕ್ತಿತ್ವವುಳ್ಳವರಾಗಿ ಈ ಪಾತ್ರದಲ್ಲಿ ಕಂಡುಬರಿತ್ತಾರೆ.

ಹಂಸಗೀತೆ ಕಾದಂಬರಿಯಲ್ಲಿ ಗೌರಮ್ಮ ವೆಂಕಟಸುಬ್ಬಯ್ಯನಿಗೆ ಪೂರ್ಣ ಪ್ರಮಾಣದಲ್ಲಿ ಸಂಗೀತ ಕಲಿಕೆಗೆ ಪ್ರೋತ್ಸಾಹ ನೀಡುವಳು. ಇವರಲ್ಲಿ ಆತಂಕ ಭಯ ಮಡುಗಟ್ಟಿ ಹರಿಯುತ್ತದೆ. ಕಾರಣ ತನ್ನ ಗುರುವಿನ ಸಾವಿಗೆ ಗುರಿಯಾಗುವನು. ಇದರಿಂದಾಗಿ ಈ ಪಾತ್ರ ಮನನೊಂದು ಕಥೆಯ ಬೆಳವಣಿಗೆಯ ಉದ್ದಕ್ಕೂ ಕೊರಗುತ್ತದೆ.

ಈ ಎರಡೂ ಪಾತ್ರಗಳ ವರ್ಣನೆಯಲ್ಲಿ ಒಂದು ನಾವಿನ್ಯವಿದೆ, ಹುರುಪಿದೆ, ಉತ್ಸಾಹವಿದೆ. ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಬರುವ ವಿಶಿಷ್ಟವಾದ ಪದವು ದುಃಖದ ತೀವ್ರತೆಯನ್ನು ಸೂಚಿಸುತ್ತದೆ. ಲಕ್ಷ್ಮಣನಿಗೆ ಪ್ರೋತ್ಸಾಹ ನೀಡುವ ಮತ್ತೊಂದು ಪ್ರಮುಖಪಾತ್ರ ಜಯಲಕ್ಷ್ಮಿ. ಜಯಾ ಲಕ್ಷ್ಮಣನಿಗೆ ಸಂಗೀತದ ಒಂದು ಭಾಗವೇ ಆಗಿರುತ್ತಾಳೆ. ಇವಳಿಲ್ಲದ ಬದುಕನ್ನು ಊಹಿಸಿಕೊಳ್ಳುವುದಕ್ಕೂ ಲಕ್ಷ್ಮಣನಿಗೆ ಅಸಾಧ್ಯವಾಗುತ್ತದೆ. ಜಯಾಳ ಮನಸ್ಸು ಎಂತಹದ್ದು ಎಂಬುದನ್ನ ಅ.ನ.ಕೃ ಅವರು ಮನಕರಗುವಂತೆ ಚಿತ್ರಿಸಿದ್ದಾರೆ.

ವೆಂಕಟಸುಬ್ಬಯ್ಯನ ಸಂಗೀತದ ಸಾಧನೆಗೆ ಮುಖ್ಯ ಪ್ರೇರಣೆ ಶಕ್ತಿಯಾಗಿ ಚಂದ್ರಸಾನಿ ಕಂಡುಬರುತ್ತಾಳೆ. ವೆಂಕಟಸುಬ್ಬಯ್ಯನ ಆತ್ಮೋನ್ನತಿಗೆ ತನ್ನ ಪ್ರಾಣವನ್ನು ಬಿಡುವ ಉದಾರವಾದ ಮನಸ್ಸು ತ್ಯಾಗ ಮನೋಭಾವ ಎಂತಹದ್ದು ಎಂಬುದು ಓದುಗರ ಮನಸ್ಸಿಗೆ ನಾಟುತ್ತದೆ.

ಈ ಎರಡೂ ಕಾದಂಬರಿಗಳ ಪಾತ್ರಗಳಲ್ಲಿ ದುಃಖದ ತೀವ್ರತೆಯನ್ನು ಓದುಗರೂ ಕಣ್ಣೀರು ಸುರಿಸುವಂತೆ ಚಿತ್ರಿಸುತ್ತಾರೆ. ನಿರೂಪಣಾ ಶೈಲಿಯಿಂದಾಗಿಯೇ ಇವರ ದುಃಖದ ಅಗಾಧತೆಯ ಅರಿವು ಉಂಟಾಗುತ್ತದೆ. ಎಂತಹವರನ್ನೂ ಅದು ತೃಪ್ತಗೊಳಿಸುತ್ತದೆ. ಹುಚ್ಚಿಯಂತೆ ಅಳುವ ಚಿತ್ರಣ ಓದುಗರ ಮೇಲೆ ಪರಿಣಾಮಕಾರಿಯಾದ ಪ್ರಭಾವವನ್ನು ಬೀರುತ್ತದೆ.

# ಅಧ್ಯಾಯ – ೪

## ಎರಡೂ ಕಾದಂಬರಿಗಳ ಸಾಮ್ಯತೆ ಮತ್ತು ಭಿನ್ನತೆಗಳ ವಿಶ್ಲೇಷಣೆ

ಸಾಹಿತ್ಯ ಕ್ಷೇತ್ರದಲ್ಲಿ ಕಾದಂಬರಿಕಾರನ ಸ್ಥಾನ ಪ್ರಮುಖವಾದದ್ದು ಪ್ರತಿಯೊಬ್ಬ ಕಾದಂಬರಿಕಾರನಿಗೂ ಅವರದೇ ಆದ ಇತಿಮಿತಿಗಳು ಬಲ, ದೌರ್ಬಲ್ಯಗಳು ಇರುತ್ತವೆ. ಇದರ ನಡುವೆಯೂ ಕಾದಂಬರಿಕಾರನೊಬ್ಬ ತನ್ನ ಪ್ರತಿಭೆ ಮತ್ತು ನೈಪುಣ್ಯವನ್ನು ಹೇಗೆ ಕಂಡಿರಿಸಿದ್ದಾನೆ ಎಂಬುದು ಅವರ ಸಾಧನೆಯಾಗುತ್ತವೆ. ಕಾದಂಬರಿಕಾರನ ಪರಿಶ್ರಮ ಮತ್ತು ಆಳವಾದ ಜೀವನಾನುಭವ ಅವರ ಕಾದಂಬರಿಯಲ್ಲೂ ಹೊರಹೊಮ್ಮುತ್ತವೆ. ಆದುದ್ದರಿಂದ ಬರಹವನ್ನೇ ಬದುಕಾಗಿಸಿಕೊಂಡ ಕಾದಂಬರಿಕಾರರಾದ ಅ.ನ.ಕೃ ಮತ್ತು ತ.ರಾ.ಸು ಅವರು ಕಾದಂಬರಿ ಕ್ಷೇತ್ರದಲ್ಲಿ ಮುಖ್ಯರಾಗಿ ಕಂಡುಬರುತ್ತಾರೆ.

ಕಲಾವಿದ, ಸಂಗೀತಗಾರ, ಸಾಹಿತಿಯಾಗಿರಲಿ ಜೀವನದ ಸಮಷ್ಠಿಯ ಕಡೆಗೆ ಸಾಗುತ್ತಾನೆ. ಮೊದಲು ಯಾವುದು ಭಿನ್ನವೋ ಅದರ ಪರಿಪೂರ್ಣತೆ ಅವನಿಗೆ ಗೋಚರವಾಗುತ್ತದೆ. ಆಗಲೆ ಅವನ ಜೀವನ ಪೂರ್ಣವಾಗುವುದು ಮತ್ತು ಬಾಳು ಸಾರ್ಥಕವಾಗುವುದು ಅಂತಹ ಆದರ್ಶದ ಕಡೆಗೆ ಸಾಗಿದ ಕಲಾವಿದನ ಚಿತ್ರವೇ ಸಂಧ್ಯಾರಾಗ ಮತ್ತು ಹಂಸಗೀತೆ ಕಾದಂಬರಿಗಳು. ಸಂಗೀತ ಕಲಾವಿದನ ಹೋರಾಟದ ಚಿತ್ರವನ್ನು ಈ ಕಾದಂಬರಿಗಳು ಸಂಗೀತ ಕಲಾವಿದನ ಹೋರಾಟದ ಚಿತ್ರವನ್ನು ಈ ಕಾದಂಬರಿಯನ್ನು ಓದುವುದರಿಂದ ತಿಳಿದುಕೊಳ್ಳಬಹುದು. ಪ್ರಗತಿಗೆ ಅಡ್ಡಬರುವ ಶಕ್ತಿಗಳೊಂದಿಗೆ ಕಲಾವಿದನು ಹೋರಾಟ ನಡೆಸಲು ಸಾಧ್ಯವಾಗುತ್ತದೆ. ದುರ್ಬಲವಾದ ಮಾನವ ಜೀವನವು ಪ್ರಗತಿಯ ವೇಗವನ್ನು ತಡೆಯಲಾರದೆ ಅದರಿಂದ ಜರ್ಝರಿತನಾಗುತ್ತಾನೆ. ಅನಂತರ ಪ್ರಗತಿಯನ್ನು ಬಯಸುವ ಕಲಾವಿದನಿಂದ ಅದು ದೂರ ದೂರ ಹೋಗುವುದರ ಚಿತ್ರಣವನ್ನು ಈ ಕಾದಂಬರಿಯಲ್ಲಿ ಕಾಣಬಹುದು.

ಸಂಧ್ಯಾರಾಗ ಮತ್ತು ಹಂಸಗೀತೆ ಕಾದಂಬರಿಗಳು ಸಂಗೀತ ಪ್ರಧಾನವಾದ ಕಾದಂಬರಿಗಳು, ಈ ಎರಡು ಕಾದಂಬರಿಗಳು ಯಾವುದೇ ಜೀವಂತ ವ್ಯಕ್ತಿಗಳನ್ನು ದೃಷ್ಠಿಯಲ್ಲಿಟ್ಟುಕೊಂಡು ರಚಿತವಾದುದಲ್ಲ. ಎಲ್ಲವೂ ಕಲ್ಪನಾ ಸೃಷ್ಠಿ ಸಂಗೀತಗಾರನ ಬದುಕು ಮತ್ತು ಸಾಧನೆಯನ್ನು ಕುರಿತು ವಿವರಿಸುತ್ತದೆ.

ಸಂಧ್ಯಾರಾಗ ಕಾದಂಬರಿಯಲ್ಲಿ ಅ.ನ.ಕೃ ನಿರೂಪಕರಾಗಿ ನಿಂತು ಕಾದಂಬರಿಯ ಗತಿಯನ್ನು ನಿಯಂತ್ರಿಸುವರು. ಈ ಕಾದಂಬರಿಯಲ್ಲಿ ಬರುವ ಎಲ್ಲಾ ಪಾತ್ರಗಳ ಚಿತ್ರಣವನ್ನು ಅ.ನ.ಕೃ ಅವರು ತುಂಬಾ ಸೊಗಸಾಗಿ ಚಿತ್ರಿಸಿದ್ದಾರೆ. ಕೇಂದ್ರ ಪಾತ್ರಕ್ಕೆ ಸಂಬಂಧಿಸಿದ ಹಾಗೆ ಪಾತ್ರಗಳು ಬರುತ್ತವೆ. ಆದರೆ ಕೇಂದ್ರ ಪಾತ್ರದ ಕಥೆಯನ್ನು ಹೇಳುವುದಿಲ್ಲ. ಎಲ್ಲಾ ಪಾತ್ರಗಳು ಕಥೆಯ ಬೆಳವಣಿಗೆಯಲ್ಲ ಸನ್ನಿವೇಶಗಳಿಗೆ, ಸಂದರ್ಭಗಳಿಗೆ ಅನುಗುಣವಾಗಿ ಪಾತ್ರಗಳು ಕಂಡುಬರುತ್ತವೆ.

ಹಂಸಗೀತೆ ಕಾದಂಬರಿಯಲ್ಲಿ ನಿರೂಪಕನೇ ಅನ್ವೇಷಕನಾಗಿ ಕಾದಂಬರಿಯ ಮುಖ್ಯನಾಯಕನ ಜೀವನ ಮತ್ತು ಸಾಧನೆಯನ್ನು ತಿಳಿದುಕೊಳ್ಳಲು ನಿರೂಪಕ ಪಾತ್ರದಾರಿಯಾಗಿ ಮುಖ್ಯ ನಾಯಕನ ಕಥೆಯನ್ನು ಸಂಗ್ರಹಿಸುವುದು. ಆಯಾಯ ಪಾತ್ರಗಳು ಮುಖ್ಯ ನಾಯಕನ ಜೀವಿತದ ಕಥೆಯನ್ನು ತಮಗೆ ತಿಳಿದಷ್ಟು ಮಟ್ಟಿಗೆ ನಿರೂಪಕನಿಗೆ ಹೇಳುತ್ತಾರೆ. ಬೇರೇ ಕಾದಂಬರಿಯಂತೆ ಯಾವುದೇ ಒಂದು ಪಾತ್ರ ಕಥೆ ಹೇಳಿ ನಂತರ ಲೇಖಕ ಕಥೆ ಹೇಳುವ ತಂತ್ರ ಇಲ್ಲಿಯದಲ್ಲ, ಎಂಬುದನ್ನು ಮೊದಲಿಗೆ ತಿಳಿಯಬೇಕಾಗುತ್ತದೆ. ಎರಡೂ ಕಾದಂಬರಿಗಳು ಸಂಗೀತಗಾರನ ಜೀವನ ಮತ್ತು ಸಾಧನೆಯನ್ನು ಕುರಿತು ಹೇಳುವಂಥದ್ದು, ಸಂಗೀತ ಪ್ರಧಾನವಾದ ಕಾದಂಬರಿಗಳು ವಿಷಯ ವಸ್ತು ಒಂದೇ ಆದರೆ ಅದನ್ನು ಸನ್ನೀವೇಶಕ್ಕೆ ತಕ್ಕಂತೆ ನಿರೂಪಿಸಿರುವ ಕಥಾಶೈಲಿ ಬೇರೆ ಬೇರೆ ಎಂಬುದು ಗಮನಾರ್ಹ.

ಸಂಧ್ಯಾರಾಗ ಕಾದಂಬರಿಯ ಪ್ರಾರಂಭದಲ್ಲಿ ಕುಮಾರವ್ಯಾಸ ಭಾರತದಲ್ಲಿ ಕಂಡುಬರುವ ಉದ್ಯೋಗ ಪರ್ವದ ಕರ್ಣನಭಾಗವನ್ನು ಪ್ರಸ್ತಾಪಿಸುತ್ತಾನೆ. ಗ್ರಾಮೀಣ ಪರಿಸರದ ಸಂಪ್ರದಾಯಸ್ಥ ಮಧ್ಯಮ ವರ್ಗದ ಕುಟುಂಬವೊಂದನ್ನು ಇಲ್ಲಿ ಅ.ನ.ಕೃ ಅವರು ಚಿತ್ರಿಸಿದ್ದಾರೆ. ಸಂಪ್ರದಾಯದ ಮಧ್ಯಮವರ್ಗದ ಕುಟುಂಬ ಕುಮಾರವ್ಯಾಸನ ಭಾರತದ ಕಥೆ ಕೇಳಿ ತನ್ಮಯರಾಗಿರುವ ಒಂದು ಚಿತ್ರಣವನ್ನು ಕಾದಂಬರಿಯ ಮೊದಲಲ್ಲಿ ಕೊಟ್ಟಿದ್ದಾರೆ.

ಅದೇ ತರಹ ಹಂಸಗೀತೆ ಕಾದಂಬರಿಯಲ್ಲಿ ಚಿತ್ರದುರ್ಗದ ಇತಿಹಾಸದಲ್ಲಿ ಚಿತ್ರಣವನ್ನು ನೀಡಿದ್ದಾರೆ. ಚಿತ್ರದುರ್ಗದ ಪಾಳೆಯಗಾರರ ಕಾಲದಲ್ಲಿ ಬದುಕಿದ್ದ ಸಂಗೀತಗಾರನ ಬದುಕಿನ ಚಿತ್ರಣವನ್ನು ಕುರಿತು ಅನ್ವೇಷಣೆಗೆ ಪ್ರೇರಕವಾದ ಅಂಶವಾಗಿ ಕಂಡುಬರುತ್ತದೆ. ಸಂಧ್ಯಾರಾಗ ಕಾದಂಬರಿಯಲ್ಲಿ ಲಕ್ಷ್ಮಣನೇ ಕೇಂದ್ರವ್ಯಕ್ತಿ. ಸಂಗೀತದ ಗಂಧವೇ ಇಲ್ಲದ ಕುಟುಂಬದಿಂದ ಬಂದ ಈತನಲ್ಲಿ ಸಂಗೀತ ದೈವದತ್ತವಾಗಿ ಬಂದಿರುತ್ತದೆ. ಇವನಲ್ಲಿ ಅಂತರ್ಗತವಾಗಿದ್ದ ದೈವೀಕಲೆಯನ್ನು ಗುರುತಿಸಿ ಮಾರ್ಗದರ್ಶನ ನೀಡಿದವರು ಮುಳಬಾಗಿಲು ಚೆನ್ನಪ್ಪ ಇವರು ಹೇಳಿದ ಒಳ್ಳೆಯ ನುಡಿಗಳು ಸಂಗೀತದ ಆಸಕ್ತಿಯನ್ನು ಕೆರಳಿಸುತ್ತಾ ಹೋಗುತ್ತದೆ. ಸಂಗೀತ ಕಲಿಯಬೇಕೆಂಬ ಆಸೆಯು ಸಮಸ್ಯೆಗೆ

ಸಿಲುಕುವನು. ಸಮಸ್ಯೆಯನ್ನು ಎದುರಿಸಿ ಕಲಿಯಲೇಬೇಕು ಎಂಬ ದೃಢವಾದ ಮನಸ್ಸು ಈತನಲ್ಲಿ ಹುಟ್ಟಲು ಕಾರಣರಾಗುತ್ತಾರೆ. ಸಂಗೀತವನ್ನು ಕಲಿಯುವುದಕ್ಕೆ ಪ್ರೇರಕ ಶಕ್ತಿ ಇದಾಗುತ್ತದೆ. ಸಂಗೀತ ಪ್ರಗತಿಗೆ ಅಡ್ಡ ಬರುವ ಶಕ್ತಿಗಳೊಂದಿಗೆ ಹೋರಾಡಲು ಕಲಾವಿದನಿಗೆ ಸಹಕಾರಿಯಾಗುತ್ತದೆ.

ಹಂಸಗೀತೆ ಕಾದಂಬರಿಯಲ್ಲಿಯೂ ಕೇಂದ್ರವ್ಯಕ್ತಿಯಾಗಿ ವೆಂಕಟಸುಬ್ಬಯ್ಯ ಕಂಡುಬರುತ್ತಾನೆ. ಈತನಿಗೆ ಮಾರ್ಗದರ್ಶನ ನೀಡಿದವರು ಕಸ್ತೂರಿ ರಂಗಾಚಾರ್ಯರು. ಸಂಗೀತದ ಮೇಲೆ ಇದ್ದ ಆಸಕ್ತಿಯಿಂದಾಗಿ ಮನೆಯನ್ನು ಸಹ ಬಿಟ್ಟುಹೋಗಲು ವೆಂಕಟಸುಬ್ಬಯ್ಯ ಹಾತೊರೆಯುತ್ತಿದ್ದನು. ಸಂಗೀತದ ಮೇಲೆ ಇದ್ದ ಆಸಕ್ತಿಯಿಂದಾಗಿ ದೊಡ್ಡ ಸಂಗೀತಗಾರನಾಗಿ ಬೆಳೆಯಲು ಸಹಾಯವಾಗುತ್ತದೆ. ಇಬ್ಬರಲ್ಲೂ ಸಂಗೀತವನ್ನು ಕಲಿಯಬೇಕು ಎಂಬ ಉದ್ದೇಶವೇ ಇಲ್ಲಿ ಮುಖ್ಯವಾಗಿ ಕಂಡುಬರುವ ಅಂಶ. ಆದರೆ ಕಲಿಕೆಯ ವಿಧಾನಗಳು ಬೇರೆ ಬೇರೆಯಾಗಿರುವುದನ್ನು ಗಮನಿಸಬಹುದು.

ಸಂಧ್ಯಾರಾಗ ಕಾದಂಬರಿಯಲ್ಲಿ ಶ್ರೀನಿವಾಸರಾಯರ ತಾಯಿಯ ಸಾವಿನಿಂದಗಿ ಕಥೆ ಅನೀರೀಕ್ಷಿತ ತಿರುವನ್ನು ಪಡೆದುಕೊಳ್ಳುತ್ತದೆ. ಊರನ್ನು ಬಿಟ್ಟು ಬೆಂಗಳೂರಿಗೆ ಬಂದು ನೆಲೆಸಿದ ರಾಯರ ಕುಟುಂಬ ನೆಮ್ಮದಿಯನ್ನು ಕಳೆದುಕೊಂಡು ನೋವಿಗೆ ಒಳಗಾಗುತ್ತಾರೆ. ರಾಮುವಿನ ವರ್ತನೆಯಿಂದಾಗಿ ಇಡೀ ಕುಟುಂಬ ಸಾವಿಗೆ ಗುರಿಯಾಗುತ್ತದೆ. ಇದರಿಂದ ಬೇಸತ್ತ ಶಾಂತ ಮತ್ತು ವೆಂಕಟೇಶ ರಾಮುವಿನ ಅಪಮಾನಕ್ಕೆ ಒಳಾಗಾಗುತ್ತಾರೆ. ಕೊನೆಗೆ ಅವರು ಮನೆಯನ್ನು ಬಿಟ್ಟು ಬರುವರು.

ಹಂಸಗೀತೆ ಕಾದಂಬರಿಯಲ್ಲಿ ವೆಂಕಟಸುಬ್ಬಯ್ಯನ ಸಂಗೀತದ ಬಾಲಪ್ರತಿಭೆಯಿಂದ ಇವನ ಗುರುಗಳಾದ ತಿರುಮಲಯ್ಯ ಸೋತು ಸಾವಿಗೆ ಗುರಿಯಾಗುವನು. ತಿರುಮಲಯ್ಯನ ಸಾವು ಅನಿರೀಕ್ಷಿತವಾದ ಕಥೆಯ ತಿರುವಿಗೆ ಕಾರಣವಾಗುತ್ತದೆ. ಈ ಎರಡು ಕಾದಂಬರಿಗಳಲ್ಲಿ ಒಂದೊಂದು ಕಾರಣದಿಂದ ಕಥೆಯ ಬೆಳವಣಿಗೆ ಅನಿರೀಕ್ಷಿತವಾದ ತಿರುವಿಗೆ ಒಳಗಾಗುತ್ತದೆ. ಈ ಸನ್ನಿವೇಶದ ಚಿತ್ರಣದ ಭಾಷೆ ಗಂಭೀರವಾದ ರೀತಿಯಲ್ಲಿ ಸಾಗುತ್ತಾ ಹೋಗುತ್ತದೆ. ಇದಕ್ಕೂ ಓದುಗರ ಮನಸ್ಸಿನಲ್ಲಿ ಕನಿಕರ ಮತ್ತು ನೋವು ಉಂಟಾಗುವಂತೆ ಚಿತ್ರಿಸಿದ್ದಾರೆ.

ಲಕ್ಷ್ಮಣನಿಗೆ ಜಯಾ ನೀಡಿದ ಪ್ರೋತ್ಸಾಹದಿಂದಾಗಿಯೇ ಸಂಗೀತವನ್ನು ಕಲಿತು ದೊಡ್ಡ ಸಂಗೀತಗಾರನಾಗಲು ಮುಖ್ಯ ಪ್ರೇರಣೆಯಾಗುತ್ತಾಳೆ. ಅಣ್ಣ ರಾಮುವಿನ ವರ್ತನೆಯಿಂದ ರಾಯರ ಕುಟುಂಬ ಕಷ್ಟಕ್ಕೆ ಸಿಲುಕುತ್ತದೆ. ಜಯಾ ಇಲ್ಲದ ಬದುಕು ಲಕ್ಷ್ಮಣನಿಗೆ ಶೂನ್ಯವಾಗಿ ಬಿಡುತ್ತದೆ. ಹುಚ್ಚನಂತೆ ಅಲೆಯುವ ಮನಸ್ಸು ತುಂಬಾ ನೋವಿಗೆ ಒಳಗಾಗಿರುವುದನ್ನು ಅ.ನ.ಕೃ ಹೃದಯ ತಲ್ಲಣಿಸುವವಂತೆ ಚಿತ್ರಿಸಿದ್ದಾರೆ. ಈತನನ್ನು ಮದರಾಸಿನಲ್ಲಿ ಉಪಚರಿಸಿದ ಡಾಕ್ಟರ್ ಅರುಣಾಚಲ ಮೊದಲಯಾರ್‌ರವರಿಂದ ದೊರೆತ ಸಕಾಲಿಕ ನೆರವು, ತಂಜಾವೂರು ಕೃಷ್ಣಯ್ಯನವರ ಬಳಿ ಸಂಗೀತ ಕಲಿಯಲು ಸಾಧ್ಯವಾಗುತ್ತದೆ.

ಕಲಾವಿದ ಒಂದು ಸಮಸ್ಯೆಯೊಂದಿಗೆ ಹೋರಾಡಿ ಪ್ರಗತಿಯ ಕಡೆಗೆ ಸಾಗುವ ಚಿತ್ರಣ ಓದುಗರಿಗೆ ಈ ಕಾದಂಬರಿಗಳಲ್ಲಿ ಉಂಟಾಗುತ್ತದೆ. ಗುರಿಯ ಸಾಧನೆಗೆ ಮುಖ್ಯ ಪ್ರೇರಕ ಶಕ್ತಿ ಲಕ್ಷ್ಮಣ, ಕಲಾವಿದನಾಗಿ ಕಾಣಿಸಿಕೊಳ್ಳುವುದಕ್ಕಿಂತ ಒಬ್ಬ ವ್ಯಕ್ತಿಯಾಗಿಯೇ ಕಾಣಿಸಿಕೊಂಡಿದ್ದಾನೆ. ಇವನ ಸಾಧನೆ, ಕಲಾಭ್ಯಾಸ, ಕಲಾಸಿದ್ಧಿ ಯ ಕಡೆಗೆ ಗಮನ ಹರಿಯುವುದಿಲ್ಲ. ಚುರುಕಾದ ಕ್ರಿಯೆ, ಹಿತಮಿತವಾದ ಸಂಭಾಷಣೆ, ಸುಲಲಿತವಾದ ಶೈಲಿ ಯಿಂದಾಗಿ ಈ ಕಾದಂಬರಿ ಆಕರ್ಷತವೆನಿಸುತ್ತದೆ. ಅ.ನ.ಕೃ ಅವರ ಎಲ್ಲಾ ಕಾದಂಬರಿಗಳಿಗಿಂತ ಸಂಧ್ಯಾರಾಗ ಪ್ರಸಿದ್ಧಿಯನ್ನು ಪಡೆದುಕೊಂಡಿರುವ ಕಾದಂಬರಿಯಾಗಿದೆ.

ಹಂಸಗೀತೆಯಲ್ಲಿನ ವೆಂಕಟಸುಬ್ಬಯ್ಯನಿಗೆ ಸಂಧ್ಯಾರಾಗ ಲಕ್ಷ್ಮಣನಿಗೆ ದೊರೆತಂತಹ ಪ್ರೋತ್ಸಾಹ ದೊರೆಯುವುದಿಲ್ಲ. ಸಮಸ್ಯೆಯ ಸುಳಿಗೆ ಸಿಲುಕಿ ನೊಂದು ಅಂತ್ಯದಲ್ಲಿ ಜಯವನ್ನು ಗಳಿಸುತ್ತಾನೆ. ವೆಂಕಟಸುಬ್ಬಯ್ಯನ ಸಾಧನೆ ಲಕ್ಷ್ಮಣನಿಗೆ ಸಾಟಿಯಾಗಲಿಲ್ಲ, ಲಕ್ಷ್ಮಣನ ಎಲ್ಲಾ ಸಂಗೀತ ಕಛೇರಿಗಳು ಯಶಸ್ವಿಯಾಗುವಂತೆ ವೆಂಕಟಸುಬ್ಬಯ್ಯನಿಗೆ ಯಾವುದೇ ಸಂಗೀತ ಕಛೇರಿಗಳು ಲಭ್ಯವಾಗುವುದಿಲ್ಲ.

ತಂಜಾವೂರು ಕೃಷ್ಣಯ್ಯನವರು ಲಕ್ಷ್ಮಣನಿಗೆ ಅಪರೂಪದ ರಾಗಗಳನ್ನು ಧಾರೆ ಎರೆದು ಕೊಡುವರು. ಪ್ರೀತಿ ತುಂಬಿದ ಹೃದಯದಿಂದ ಲಕ್ಷ್ಮಣನನ್ನು ತನ್ನ ಶಿಷ್ಯನನ್ನಾಗಿ ಮಾಡಿಕೊಳ್ಳುವನು. ಪ್ರಾರಂಭದಲ್ಲಿ ಎಲ್ಲರಿಂದಲೂ ನಿಂದನೆಗೆ ಒಳಾಗಾದ ಲಕ್ಷ್ಮಣ ಕಥೆಯ ಅಂತ್ಯದಲ್ಲಿ ಎಲ್ಲರ ಪ್ರೀತಿ-ವಾತ್ಸಲ್ಯಗಳನ್ನು ಪಡೆದುಕೊಳ್ಳುವನು. ಸಮಸ್ಯೆಯನ್ನು ಎದುರಿಸಿ ಪ್ರಗತಿಯ ಕಡೆಗೆ ಸಾಗಿದ ವ್ಯಕ್ತಿ ದುರ್ಬಲವಾದ ಸಮಸ್ಯೆಗಳಿಂದ ದೂರವಾಗುತ್ತಾನೆ, ಬಾಳು ಸಾರ್ಥಕವಾಗುತ್ತದೆ.

ವೆಂಕಟಸುಬ್ಬಯ್ಯ ಗುರುವನ್ನು ಕಳೆದುಕೊಂಡು ಪಶ್ಚಾತ್ತಾಪದಲ್ಲಿದ್ದಾಗ ಅವನಿಗೆ ಸಂಗೀತದ ಆಕಾಂಕ್ಷೆಯನ್ನು ಉದ್ದೀಪಿಸುವ ಮಾವ ಅನಂತಯ್ಯ ಗುರುವಿಗಾಗಿ ಹಂಬಲಿಸಿ ಕೊನೆಗೆ ಸದಾನಂದ ಬುವಾ ಎಂಬಾ ವ್ಯಕ್ತಿಗೆ ಶಿಷ್ಯಾನಾಗಿ ಅವರಿಂದ ಸಂಗೀತದ ರಾಗಗಳನ್ನು ಕಲಿತು ದೊಡ್ಡ ಹೆಸರನ್ನು ಗಳಿಸುತ್ತಾನೆ. ಚಂದ್ರಸಾನಿಯ ಸಾಮಿಪ್ಯಕ್ಕಾಗಿ ರಾಗವನ್ನು ಒತ್ತೆಯಿಡುವ ಪ್ರಸಂಗವನ್ನು ತ.ರಾ.ಸು ಕೌಶಲಪೂರ್ಣವಾಗಿ ಚಿತ್ರಿಸಿದ್ದಾರೆ ಪಾತ್ರಗಳ ಸೃಷ್ಠಿ ಕಾದಂಬರಿಯಿಂದಾ ಕಾದಂಬರಿಗೆ ನವೀನವಾಗಿರುತ್ತದೆ. ಬದುಕು ವಿಶಿಷ್ಟವಾಗಿರುತ್ತದೆ. ಚಂದ್ರಸಾನಿಯ ಪ್ರಾಣತ್ಯಾಗ ನಿಜಕ್ಕೂ ಪ್ರಮುಖವಾದುದು, ಇವನ ಆತ್ಮೋನ್ನತಿಗೆ ಕಾರಣಳಾಗುತ್ತಾಳೆ. ಈ ದುರಂತದ ಚಿತ್ರಣ ಓದುಗರ ಮನದಲ್ಲಿ ಬೇರು ಬಿಡುತ್ತದೆ. ಆಯಾಪಾತ್ರಗಳ ನಡುವೆ ನಡೆಯುವ ಸಂಭಾಷಣೆ ನಮ್ಮ ನಡುವೆಯೇ ನಡೆಯುತ್ತಿರುವಂತೆ ಭಾಸವಾಗುತ್ತದೆ.

ಲಕ್ಷ್ಮಣನು ಸಂಗೀತದ ಸಾಧನೆಯನ್ನು ಮಾಡುತ್ತಾನೆ. ವೆಂಕಟರಾಮ ಭಾಗವತರ ಹಾಡಿನಲ್ಲಿ ದೋಷವನ್ನು ಗುರುತಿಸಿ ತಾನೇ ಸಂಗೀತ ಕಾರ್ಯಕ್ರಮದಲ್ಲಿ ಹಾಡಿ ಎಲ್ಲರ ಮೆಚ್ಚುಗೆಗೆ ಪಾತ್ರನಾಗುತ್ತಾನೆ. ಈ ಸಂದರ್ಭದಲ್ಲಿ ಜಯಾಳ ನೆನಪು ಮನಸ್ಸಿನಲ್ಲಿ ಮೂಡುತ್ತದೆ. ಕೊನೆಗೆ ಲಕ್ಷ್ಮಣ ತಂಬೂರಿಯ ಜೊತೆಯಲ್ಲಿ ನೆಲಕ್ಕುರುಳುವನು. ಇದರಿಂದಾ ಸಂಗೀತಗಾರ ಸಾಧನೆ ಎಂತಹದು ಎಂಬುದನ್ನು ತಿಳಿಯಬಹುದು.

ವೆಂಕಟಸುಬ್ಬಯ್ಯ ಪೂರ್ವರಾಗವನ್ನು ಕಲಿತು ದೊಡ್ಡ ಸಂಗೀತಗಾರನಾಗುವನು. ಸಂಗೀತದ ಸಭೆಯಲ್ಲಿ ಸನ್ಯಾಸಿಯ ಶಿಷ್ಯನಿಂದ ಸೋತು ಸಾಯುವ ಮನಸ್ಸು ಮಾಡುವ ಪ್ರಸಂಗ ಇವನಲ್ಲಿದ್ದ ಅಹಂಕಾರದ ಭಾವನೆಯನ್ನು ತೊಲಗಿಸುತ್ತಾರೆ. ಮರ್ಯಾದೆಗೆ ಹೆದರಿ ಸಾಯುವ ನಿರ್ಧಾರ ತೆಗೆದುಕೊಳ್ಳದ ಮಾನವ ದೌರ್ಬಲ್ಯವನ್ನು ಕಾಣಬಹುದು.

ಅ.ನ.ಕೃ ಅವರು ತುಂಬಾ ಅರ್ಥಪೂರ್ಣವಾದ ಅಂತ್ಯವನ್ನು ಕಾದಂಬರಿಗೆ ತಂದಿರುವರು. ಅವರು ಕೊನೆಯಲ್ಲಿ ಈ ರೀತಿ ಹೇಳುತ್ತಾರೆ. ಗಾಯಕರು ಸಂಧ್ಯಾರಾಗದಲ್ಲಿ ತನ್ನ ಆತ್ಮ ಪ್ರಣತಿಯನ್ನು ತೇಲಿ ಬಿಟ್ಟಿದ್ದನು ಮುಂದೆ ಬಿದ್ದ ಗಾಢಾಂಧಕಾರಕ್ಕೆ ಆ ಪ್ರಣತಿಯ ತೇಜಸ್ಸೇ ಬೆಳಕು. ತನ್ನ ಜೀವನದ ಸಂಧ್ಯಾರಾಗವನ್ನು ಹೇಳಿ ಮುಗಿಸಿದನು. ಮರಳಿ ಉದಯರಾಗದ ಕರೆ ಸಂಧ್ಯಾರಾಗ ಎಲ್ಲರ ಕಿವಿಗೆ ಬಿದ್ದಿತ್ತು. ಆದರೆ ಉದಯರಾಗ ಕೇಳಿ ಬಂದುದು ಲಕ್ಷ್ಮಣನೊಬ್ಬನಿಗೆ!

ವೆಂಕಟಸುಬ್ಬಯ್ಯನಿಗೆ ಸಂಗೀತದ ವಿಚಾರಗಳನ್ನು ಬೋಧಿಸುವ ಬುವ ಪ್ರಬುದ್ಧದ ಸಂಕೇತವಾಗಿ ಕಂಡುಬರುತ್ತಾನೆ. ತಲೆಹೊಯಿಕ ವೀರಣ್ಣ ಪ್ರಸಂಗ, ತಿರುಮಲಯ್ಯನ ಸಾವು, ಓದುಗರನ್ನು ಸೂಜಿಗಲ್ಲಿನಲ್ಲಿ ಸೆಳೆಯುವ ಚಂದ್ರಸಾನಿ, ಕೇಂದ್ರವ್ಯಕ್ತಿ ವೆಂಕಟಸುಬ್ಬಯ್ಯ ನಾಲಿಗೆಯನ್ನು ಕತ್ತರಿಸಿಕೊಳ್ಳುವುದು, ರಾಜನ್ನೇ ಪ್ರತಿಭಟಿಸುವ ರೀತಿ ಇವರುಗಳ ದುರಂತ ಚಿತ್ರಣ ಓದುಗರ ಕಣ್ಣೀರು ಸುರಿಸುವಂತೆ ಮಾಡುವುದಲ್ಲದೆ, ಯಾವುದೋ ಪವಾಡವನ್ನು ಉಸಿರುಗಟ್ಟಿ ನೋಡಿದ ಅನುಭವವಾಗುತ್ತದೆ. ಈ ಸಂದರ್ಭಗಳಲ್ಲಿ ನಿಷ್ಠಾವಂತ ಭಕ್ತನ ದರ್ಶನವಾಗುತ್ತದೆ. ಇಬ್ಬರೂ ದೈವದರ್ಶನ ಪಡೆಯಬಲ್ಲ, ಆತ್ಮ ಸ್ಥೈರ್ಯವುಳ್ಳ ಸಾಧಕರು. ದೈವನಿಷ್ಠೆ ಮತ್ತು ವ್ಯಕ್ತಿನಿಷ್ಠೆಗಳ ಪ್ರತೀಕವಾಗುತ್ತಾರೆ. ದೇವರ ತಲೆಯಲ್ಲಿ ಕೂದಲು ಕಾಣಿಸಿಕೊಂಡಾಗ ವೀರಣ್ಣನಿಗೆ, ಭೈರವಿ ರಾಗವನ್ನು ಒಲಿಸಿಕೊಂಡಾಗ ವೆಂಕಟಸುಬ್ಬಯ್ಯನಿಗೆ ಆಗುವ ಸಂತೋಷ ದೈವ ಸಾಕ್ಷಾತ್ಕಾರದ ಸಾಧನೆಯೇ ಆಗಿದೆ. ಕಾದಂಬರಿಯ ಪರಿಣಾಮಕಾರಿಯಾದ ಅಂತ್ಯ ಓರ್ವ ಕಲಾವಿದನ ಸಮರ್ಪಣಾಭಾವದ ಧನ್ಯತೆಯ ಅನುಭವವನ್ನು ಓದುಗರಲ್ಲಿ ಉಂಟುಮಾಡುತ್ತದೆ. ಇದು ಅರ್ಥಪೂರ್ಣವೂ ಆಗಿದೆ.

ಲಕ್ಷ್ಮಣನ ಗುರುಗಳಾದ ಪೂರ್ವಿ ಕೃಷ್ಣಯ್ಯರ್ ಪೂರ್ವಿರಾಗದ ಹಾಡುಗಾರಿಕೆಯ ಅನನ್ಯತೆ ಹಾಗೂ ಅದು ಕೊಡುವ ಧನ್ಯತಾಭಾವದ ವಿವರಣೆ ಕೊಟ್ಟಿರುವುದನ್ನು ಮನನ ಮಾಡಿದಾಗ, ಪೂರ್ವಿಯನ್ನು ದತ್ತು ಕೊಟ್ಟಿದ್ದೇನೆ ನಾನು ಆಸೆಪಟ್ಟುಕೊಂಡಿದ್ದ ಹಾಗೆ ಎಂದಾದರೂ ನೀನು ಹಾಡಿಬಿಡು ಅಂದು ನಾನು ಪಾವನನಾಗುತ್ತೇನೆ, ಋಣಮುಕ್ತನಾಗುತ್ತೇನೆ. ನಿನ್ನಿಂದ ನಾನು ನಿರೀಕ್ಷಿಸುವ ಗುರುದಕ್ಷಿಣೆ ಅದೇ ಕಣಪ್ಪಾ" ಎನ್ನುವ ಗುರುವಾಣಿ ಕಾದಂಬರಿಯನ್ನು ಓದಿ ಮುಗಿಸಿದಾಗ ಪ್ರತಿಧ್ವನಿಸುತ್ತದೆ. ಯಾರ ಋಣಮುಕ್ತವಾಯಿತು ಗುರುವಿನದೆ, ಶಿಷ್ಯನದೆ? ಎಂಥಹ ಹೃದಯ ಬೇಧಿಸುವ ಗುರುದಕ್ಷಿಣೆ ಅದು? ಯೋಚಿಸಿದಷ್ಟು ಅದು ಕ್ಲಿಷ್ಟವಾಗುತ್ತದೆ.

ಹಂಸಗೀತೆ ಕೇಂದ್ರ ಪಾತ್ರದ ಔನ್ನತ್ಯಕ್ಕೆ ಪೂರಕವಾಗುವಂತೆ ಹಲವು ದುರಂತಹಗಳ ಮಾಲೆಯನ್ನು ಸೃಷ್ಟಿಸಿದೆ. ತಿರುಮಲಯ್ಯ ಹಾಗೂ ಬುವಾಇಬ್ಬರನ್ನು ಒಂದೊಂದು ಕಾರಣಕ್ಕೆ ಸಾಯಿಸುವ ಕಾದಂಬರಿಕಾರ ಕಥಾ ಬೆಳವಣಿಗೆಯ ಮಾರ್ಗವನ್ನು ಸುಗಮಗೊಳಿಸಿಕೊಂಡಿದ್ದಾರೆ. ಚಂದ್ರಸಾನಿಯ ಸಾವು ವೆಂಕಟಸುಬ್ಬಯ್ಯನ ವ್ಯಕ್ತಿತ್ವವನ್ನು ಪುಟಕ್ಕಿಟ್ಟ ಚಿನ್ನವಾಗಿಸುತ್ತದೆ. ಸಾರ್ಥಕ ಬದುಕಿನ ಅಂತ್ಯವೂ ಆಗುತ್ತದೆ.

ಸಂಧ್ಯಾರಾಗದ ವೈಶಿಷ್ಟ್ಯವಿರುವುದು ಸಂಗೀತಕ್ಕೆ ಮೀಸಲಿಟ್ಟ ಕಲಾವಿಧನೊಬ್ಬನ ದುರಂತ ಬದುಕಿನಲ್ಲಿ. ವಾಸ್ತವ ನೆಲೆಯಲ್ಲಿ ಚಿತ್ರಣಗೊಂಡಿರುವುದಲ್ಲಿ ಇಲ್ಲಿನ ಎಲ್ಲಾಪಾತ್ರಗಳು ಪೂರ್ಣ ರೂಪದಲ್ಲಿ ಕಾದಂಬರಿಯ ಜೊತೆಗೆ ಸಾವಯವ ಸಂಬಂಧವನ್ನು ಪಡೆದುಕೊಂಡಿರುವುದರಲ್ಲಿ,

ಮನುಷ್ಯ ಸಂಬಂಧಗಳನ್ನು ಅ.ನ.ಕೃ ಚಿತ್ರಿಸುವಾಗ ಪರಿಣಾಮೈಕ್ಯತೆಯನ್ನು ರಾಮಚಂದ್ರನ ವೈಪರೀತ್ಯಗಳಿಂದಾಗಿ ಕಾದಂಬರಿಯಲ್ಲಿನ ಹಲವು ಪಾತ್ರಗಳು ನೋಂದರೂ ಬದುಕಿನಲ್ಲಿ ಯಶಸ್ಸು ಕಾಣುವರು.

ಹಂಸಗೀತೆ ಕಾದಂಬರಿಯಲ್ಲಿ ಗುರು-ಶಿಷ್ಯರ ಸಂಬಂಧ, ಬುವಾ ರಾಗ-ತಾಳ ಸ್ವರಗಳ ಬಗ್ಗೆ ಮಾಡುವ ವಿಸ್ತೃತ ಚರ್ಚೆ, ದೈವರಾಧನೆ ಹಾಗೂ ಸಾಧನೆಯಲ್ಲಿ ಪಡೆಯುವ ಯಶಸ್ಸು, ಈ ಕಾದಂಬರಿಯ ನವುರಾದ ವಿವರಣೆ, ಭಾವ-ಭಾಷೆಗಳ ಜೀವಂತಿಕೆ ಕಾದಂಬರಿಯ ಯಶಸ್ಸಿಗೆ ಮುಖ್ಯ ಕಾರಣವಾಗಿದೆ.

ಸಂಧ್ಯಾರಾಗ ಕಾದಂಬರಿಯ ಆರಂಭದ ತಂತ್ರವು ಓದುಗರನ್ನು ಆಕರ್ಷಿಸುತ್ತದೆ. ಅನಂತರದ ವಿವರಣೆ ಮೂಲ ಪ್ರಶ್ನೆಯನ್ನು ಮರೆಸಿ ಮತ್ತೆಲ್ಲೋ ಸಾಗುತ್ತವೆ. ನಂತರ ಮೂಲದ ಪ್ರಶ್ನೆಗೆ ಉತ್ತರ ಸಿಕ್ಕಿ ತನ್ನ ಅಸ್ಥಿತ್ವದ ಬಗೆಗಿನ ಚಿಂತನೆಗೆ ಒಳಗಾಗುತ್ತಾನೆ. ನಂತರ ತನ್ನ ಸಾಧನೆಯ ಕಡೆಗೆ ಸಾಗುತ್ತಾನೆ.

ಹಂಸಗೀತೆ ಕಾದಂಬರಿ ನಿರೂಪಣಾ ತಂತ್ರದೊಂದಿಗೆ ಆರಂಭಗೊಳ್ಳುವ ಪ್ರಮುಖ ಕಾದಂಬರಿಯಾಗಿದೆ. ಈ ಕಾದಂಬರಿ ಬೆಳಯುವುದು ನಿರೂಪಣೆ ಮತ್ತು ಸಂಭಾಷಣೆಯ ತಂತ್ರದಲ್ಲಿಯೇ. ಕಾದಂಬರಿಯ ಆಶಯವನ್ನು ವ್ಯಕ್ತಪಡಿಸಲು ಉಪಯೋಗಿಸುವ ಈತಂತ್ರ ಯಶಸ್ವಿಯಾಗಿದೆ. ನಿರೂಪಣಾ ತಂತ್ರದಿಂದಾಗಿ ಪ್ರತಿಯೊಬ್ಬರ ಗುಣಾ ಸ್ವಭಾವಗಳು ಪರಿಚಯವಾಗುತ್ತವೆ. ಪ್ರತಿಯೊಬ್ಬರೂ, ನೋವು-ನಲಿವುಗಳು, ದುಃಖ-ವಿರಹಗಳು, ಭಾವಾವೇಗಗಳು ನಿರೂಪಣಾ ತಂತ್ರದಿಂದಾಗಿಯೇ ಪದರ ಬಿಚ್ಚಿಕೊಳ್ಳುವುದರಿಂದ ಇದೊಂದು ಯಶಸ್ವಿಯಾದ ಕಾದಂಬರಿಯಾಗಿದೆ.

ಸಂಧ್ಯಾರಾಗ ಮತ್ತು ಹಂಸಗೀತೆ ಕಾದಂಬರಿಗಳಲ್ಲಿ ಕಂಡುಬರುವ ಲಕ್ಷ್ಮಣ ಮತ್ತು ವೆಂಕಟಸುಬ್ಬಯ್ಯ ಸಂಗೀತ ಸಾಧನೆಗಾಗಿ ಪಡುವ ಕಷ್ಟ ಓದುಗರನ್ನು ಸೂಜಿಗಲ್ಲಿನಂತೆ ಸೆಳೆಯುತ್ತವೆ. ಎದುರಗುವ ಸಮಸ್ಯೆಗಳಿಗೆ ಸಿಲುಕಿ ಜರ್ಝರಿತರಾಗುತ್ತಾರೆ. ಅನಂತರ ಸಮಸ್ಯೆಯನ್ನು ಎದುರಿಸಿ ಪ್ರಗತಿಯ ಕಡೆಗೆ ಸಾಗುತ್ತಾರೆ.

ಸಂಧ್ಯಾರಾಗ ಕಾದಂಬರಿ ಅ.ನ.ಕೃ ಅವರು ಎಲ್ಲಾ ಕಾದಂಬರಿಗಳಿಗಿಂತ ಹೆಚ್ಚು ಮನ್ನಣೆಯನ್ನು ಗಳಿಸಿರುವ ಕಾದಂಬರಿಯಾಗಿದೆ. ಸಂಧ್ಯಾರಾಗ ಕಾದಂಬರಿಯನ್ನು ಬರೆದು ತಮ್ಮ ಅಸಾಮಾನ್ಯ ಪ್ರತಿಭೆಯನ್ನು ಪ್ರಕಟಿಸಿದ್ದು ಒಂದು ದಾಖಲೆಯಾಗಿದೆ. ಇದಕ್ಕೆ ಕಾರಣ ನೈಜ ನಿರೂಪಣೆ ಹಾಗೂ

ಅದರ ಕಲಾತ್ಮಕ ಅನನ್ಯತೆ. ಸಂಧ್ಯಾರಾಗದ ಮೂಲಕ ಕಲಾವಿದರ ಬದುಕು-ಬವಣೆ ಕೊಡುಗೆಗಳನ್ನು ಚಿತ್ರಿಸುವ ಒಂದು ಮಾಲಿಕೆಯನ್ನೇ ಅ.ನ.ಕೃ ಪ್ರಾರಂಭಿಸಿದರು. ಈ ಕಾದಂಬರಿ ಲಕ್ಷ್ಮಣನ ಸ್ಥಿತಿಗಳನ್ನು ಚಿತ್ರಿಸುವಲ್ಲಿ ಯಶಸ್ವಿಯಾಗಿದೆ.

ಹಂಸಗೀತೆ ಕಾದಂಬರಿಯಲ್ಲೂ ಸಹ ಕಲಾವಿದನ ನೋವು-ನಲಿವು, ಬದುಕು-ಬವಣೆ, ಸಂಗೀತಸ ಸಾಧನೆ ಇವುಗಳನ್ನು ಚಿತ್ರಿಸುವಾಗ ಒಂದು ಮಾಲಿಕೆಯಾಗಿದೆ. ಕಾದಂಬರಿಯಲ್ಲಿ ಪ್ರಮುಖವಾಗಿ ಕಾಣುವ ಸಂಭಾಷಣಾ ತಂತ್ರ ಕಾದಂಬರಿಗೆ ನಾಟಕೀಯತೆ ಸೊಗಸನ್ನು ತಂದುಕೊಟ್ಟಿದೆ. "೧ಸಂಗೀತಗಾರನೊಬ್ಬನ ಬಾಳಿನ ಹಂದರದ ಮೇಲೆ ಹಿಂದಿನ ಮತ್ತು ಇಂದಿನ ಸಂಸ್ಕೃತಿಯನ್ನು ನಾನಿಲ್ಲಿ ಚಿತ್ರಿಸಿ ಹೇಳಿದ್ದೇನೆ. ಕಾದಂಬರಿಯಲ್ಲಿ ಲೇಖನದಲ್ಲಿ ಬಳಸಿರುವ ತಂತ್ರಕ್ಕೆ ಇದು ಕಾರಣ೧" ಎಂಬ ಲೇಖಕರ ಆಸೆ ಕಾದಂಬರಿಯ ಒಟ್ಟಂದದಲ್ಲಿ ಯಶಸ್ವಿಯಾಗಿದೆ.

'ಸಂಧ್ಯಾರಾಗ' ಮತ್ತು 'ಹಂಸಗೀತೆ' ಕಾದಂಬರಿಗಳು ಸಂಗೀತಗಾರರ ಜೀವನ ಮತ್ತು ಸಾಧನೆಯನ್ನು ಕುರಿತು ಹೇಳುವ ಕಾದಂಬರಿಗಳಾಗಿವೆ. ಕಥೆ, ಕಾದಂಬರಿಗಳ ವಸ್ತು , ಸನ್ನಿವೇಶ, ಪಾತ್ರಚಿತ್ರಣ ಇವುಗಳಲ್ಲಿ ಅ.ನ.ಕೃ ಮತ್ತು ತ.ತಾ.ಸು ಅವರು ತೋರುವ ಕಲಾತ್ಮಕತೆ ಎದ್ದು ಕಾಣವಂಥದ್ದು ಭಾಷೆಯನ್ನು ಯಾವುದೇ ಸಂದರ್ಭದಲ್ಲಿಯೂ ಭಾವರೇಕದ ಸಾಧನವಾಗಿ ಬಳಸದೆ ಸಂಯಮ ಪೂರ್ಣ ಹೆಜ್ಜೆಯಿಂದಲೇ, ಈ ಹೆಜ್ಜೆಗನುಗುಣವಾದ ಸಹೃದಯನಿಗೆ ಅನಾವರಣಗೊಳ್ಳುವುದು ತುಂಬಾ ಪ್ರಮುಖವಾದ ಸಂಗತಿಯಾಗಿದೆ.

---

**ಅಡಿಟಿಪ್ಪಣಿ**

ತ.ರಾ.ಸು – ಹಂಸಗೀತೆ[ಮುನ್ನುಡಿ]

# ಅಧ್ಯಾಯ – ೫

## ಭಾಷೆ ಮತ್ತು ಶೈಲಿಯ ಅಭಿವ್ಯಕ್ತಿ

ಇಂದೇ ಮನೋಧರ್ಮದ, ಒಂದೇ ಪರಂಪರೆಯ ಕಾದಂಬರಿಕಾರರಾದರೂ ಪ್ರತಿಯೊಬ್ಬ ಕಾದಂಬರಿಕಾರನ ಭಾಷೆ ಮತ್ತು ಶೈಲಿ ಭಿನ್ನವಾಗಿರುತ್ತವೆ. ಪ್ರತಿಭಾ ಮೂಸೆಯಲ್ಲಿ ಹೊರಬರುವ ಕಲಾಕೃತಿ ಆಯಾವ್ಯಕ್ತಿಯ ವೈಯಕ್ತಿಕತೆಯನ್ನು ಪ್ರತಿನಿಮಿಸುವುದು ಸಹಜವಾಗಿಯೇ ಇದೆ.

ಸಂಸ್ಕೃತ ಭೂಯಿಷ್ಠಶೈಲಿಯ ಕುವೆಂಪು, ಜಾನಪದ ಸೊಗಡಿನ ಬೇಂದ್ರೆ, ಸರಸ ಲಲಿತ ಶೈಲಿಯ ಕೆ.ಎಸ್. ನರಸಿಂಹಸ್ವಾಮಿ ಹೀಗೆ ಅವರವರ ವ್ಯಯಕ್ತಿಕ ಶೈಲಿಯನ್ನ ಸ್ಪಷ್ಟವಾಗಿಯೇ ಗುರುತಿಸಬಹುದು. ಕೃತಿ ರಚನೆಗೆ ತೊಡಗಿದ ತ.ರಾ.ಸು. ಕಾದಂಬರಿಗಳಲ್ಲಿ ಅ.ನ.ಕೃ ಅವರ ಪ್ರಭಾವ ಕಂಡುಬಂದರೂ ಅ.ನ.ಕೃ ಅವರ ಶೈಲಿಯಿಲ್ಲ. ಅನಂತರದ ಬರವಣಿಗೆಯಲ್ಲಿ ವಸ್ತು ಒಂದೇ ಆದರೂ ನಿರೂಪಣಾ ಧಾಟಿ ವಿಭಿನ್ನವೂ, ವೈಶಿಷ್ಟ್ಯಪೂರ್ಣವೂ ಆಗುವುದಕ್ಕೆ ಅವರದೇ ಆದ ಭಾಷ ಶೈಲಿಯೇ ಕಾರಣ. ಭಾಷೆಯಲ್ಲಿ ಗಾಂಭೀರ್ಯತೆಯನ್ನು, ಶೈಲಿಯ ಕುಶಲತೆಯನ್ನು ಒಳಗೊಂಡ ಅವರ ಶೈಲಿ ವಿನೂತವಾದುದು.

ಪ್ರತಿಯೊಬ್ಬ ಪ್ರತಿಭಾವಂತ ಕವಿ, ಕಾದಂಬರಿಕಾರನಿಗೆ ತನ್ನದೇಯಾದ ಸಿದ್ಧ ಶೈಲಿಯಿರುತ್ತದೆ. ಕಾದಂಬರಿಯಲ್ಲಿ ಭಾಷೆಯದೇ ಪ್ರಮುಖ ಪಾತ್ರ, ಭಾಷೆಯ ಶೈಲಿಯ ಅಂತರಂಗದ ಚೆಲುವು ಅಥವಾ ಶಕ್ತಿ ಅ.ನ.ಕೃ ಅವರು ತಮ್ಮ ಕೃತಿಗಳಲ್ಲಿ ಅಥವಾ ಕಾದಂಬರಿಗಳಲ್ಲಿ ಬಳಸುವ ಭಾಷೆಯಲ್ಲಿ ವೈವಿಧ್ಯತೆ ಇದೆ. ಅದರಲ್ಲಿಯೂ ಮುಖ್ಯವಾಗಿ ಮಧ್ಯಮ ಬ್ರಾಹ್ಮಣ ಕುಟುಂಬದ ಭಾಷೆಯಿದೆ. ಜೊತೆಗೆ ಗ್ರಾಮೀಣ ಭಾಷೆಯನ್ನು ಸಹ ಬಳಸಿದ್ದಾರೆ. ಆದರೆ ಜೀವಂತಿಕೆಯಿರುವುದು ಸಹಜವೂ ಆಕರ್ಷಣೀಯವೂ ಆದ ನಿರೂಪಣೆಯ ಸಂಭಾಷಣೆಯಲ್ಲಿ ನಡುನಡುವೆ ಆಕರ್ಷತವಾದ ಗಾದೆಗಳ ಬಳಕೆಯು ಸಹ ಇದೆ.

ಸಂಧ್ಯಾರಾಗ ಕಾದಂಬರಿಯಲ್ಲಿ ಗ್ರಾಮೀಣ ಪರಿಸರದ ಸಂಪ್ರದಾಯಸ್ಥ ಮಧ್ಯಮವರ್ಗದ ಕುಟುಂಬವೊಂದು ಕುಮಾರವ್ಯಾಸ ಭಾರತದ ಕರ್ಣಪರ್ವವನ್ನು ಕೇಳಿ ಪ್ರಾರಂಭದಲ್ಲಿ ಕೊಡುವರು.

**ಉದಾ:–** ಅದೊಡ್ಡೈವರು ಮಕ್ಕಳು ತಲೆ

ಗಾದು ತೋರ್ರೈ ಕಂದ ನಿನಗೆ

ನೀ ದುರಾಗ್ರಹ ವೊಪ್ಪವುದೇ ಕೌರವರ ಸೇವೆಯೊಳು

ಹೊರ ಬಾಣದ ಮರಳಿ ತೊಡದಿರು

ಮೂದು ಕಳೆ ವೈರವ

ತ.ರಾ.ಸು ಅವರು ತಮ್ಮ ಕಾದಂಬರಿಯಲ್ಲಿ ಪಾತ್ರಗಳಿಗೆ ಅನುಗುಣವಾದ ಭಾಷೆಯನ್ನು ಬಳಸುವುದರಲ್ಲಿ ಸಿದ್ಧ ಹಸ್ತರು. ಹಂಸಗೀತೆ ಕಾದಂಬರಿಯಲ್ಲಿ ಬರುವ ಪಾತ್ರಗಳು ತಮ್ಮ ಸಾಂಸ್ಕೃತಿಕ ಸ್ವರಕ್ಕೆ ಅನುಗುಣವಾಗಿ ಭಾಷೆಯನ್ನು ಬಳಸುವುದರಲ್ಲಿ ಸಿದ್ದಹಸ್ತರು ಹಂಸಗೀತೆ ಕಾದಂಬರಿಯಲ್ಲಿ ಬರುವ ಪಾತ್ರಗಳು ತಮ್ಮ ಸಾಂಸ್ಕೃತಿಕ ಸ್ತರಕ್ಕೆ ಅನುಗುಣವಾದ ಭಾಷೆಯನ್ನು ಆಡುವುದರಿಂದಲೇ ಓದುಗರ ಮನದಲ್ಲಿ ಅಚ್ಚಳಿಯದ ಪ್ರಭಾವವನ್ನು ಬೀರುತ್ತದೆ. ಈ ಕಾದಂಬರಿಯ ಭಾಷೆ ಮತ್ತ ಶೈಲಿಗಳೆಡು ಓದುಗನನ್ನು ಮಂತ್ರಮುಗ್ಧರನ್ನಾಗಿಸುತ್ತದೆ. ಕಥಾ ನಿರೂಪಕನೊಂದಿಗೆ ಮಾತನಾಡುವಾಗ ಪಾತ್ರಗಳು ಶುದ್ಧ ಗ್ರಾಮ್ಯ ಭಾಷೆಯಲ್ಲಿ ಮಾತನಾಡುತ್ತೇವೆ.

ಉದಾ:- "ಅರಳಿಮರದಲ್ಲಿ ಚಿತ್ರ ಬರೆದಿದೆಯೋ? ಸುಮ್ಮನೆ

ಯಾವಾಗಲೂ ಅಲ್ಲೇನು ನೋಡ್ತಾ ಇರ್ತಿ"?

"ನೋಡ್ತಾ ಇರಲಿಲ್ಲ, ಉಪಾದ್ರೆ"....

ಅ.ನ.ಕೃ ಅವರದು ನಿರೂಪಣಾ ಶೈಲಿಯಾಗಿರುವುದರಿಂದ ಪಾತ್ರ, ಸಂದರ್ಭ, ಸನ್ನಿವೇಶಗಳಿಗೆ ಅನುಗುಣವಾಗಿ ಬಳಸುವ ಭಾಷೆಯಲ್ಲಿ ವೈವಿದ್ಯತೆ ಕಾಣಿಸಿಕೊಳ್ಳುತ್ತದೆ.

**ಉದಾ:**-ಮೀನಾಕ್ಷಮ್ಮನಿಗೆ ಮಕ್ಕಳಿಲ್ಲದ ಕೊರಗು ಹೆಚ್ಚಾದಾಗ ಗೌರತ್ತೆಗೆ ನನ್ನಿಂದ ನಿಮ್ಮ ಮನೆತನ ನಿಲ್ಲಬಾರದು ನಿಮ್ಮ ಮಗನಿಗೆ ಬೇರೊಂದು ಮದುವೆ ಮಾಡಿ ಎಂದು ಒತ್ತಾಯಿಸಿದ ಸಂದರ್ಭದಲ್ಲಿ ಅವರಿಬ್ಬರ ನಡುವೆ ನಡೆದ ಸಂಭಾಷಣೆ ಎರಡು ಹೆಣ್ಣು ಜೀವಗಳ ಅಂತರಂಗದ ತುಡಿತ-ಮಿಡಿತಗಳನ್ನು ಅ.ನ.ಕೃ ಮನೋಜ್ಞವಾಗಿ ಚಿತ್ರಿಸುವರು. ಮೀನಾಕ್ಷಮ್ಮನ ಅಂತರಂಗದ ಚೆಲುವು, ಉದಾತ್ತ ಸಂಸ್ಕೃತಿ ಹೃದಯ ಸಂಪನ್ನತೆ ಅವಳ ಮಾತುಗಳಲ್ಲಿ ನಿಂತಿದೆ. ಅವಳ ದಿವ್ಯ ವ್ಯಕ್ತಿತ್ವವನ್ನು ಸೆರೆಹಿಡಿದಿರುವ ಈ ಭಾಗ ಓದುಗರ ಅಂತಃಕರಣವನ್ನು ಮಿಡಿಯುತ್ತದೆ.

"ನೋಡಿ ನನಗೆ ವಯಸ್ಸು ಆಗ್ತಾಬಂತು, ಇನ್ನೇನು ಮಕ್ಕಳಾಗುವ ಸಂಭವ ಕಡಿಮೆ ನನಗೆ ಆ ಪುಣ್ಯ ಇಲ್ಲ". ಇಂತಹ ವಾಕ್ಯಗಳನ್ನು ಗಮನಿಸಬಹುದು.

ತ.ರಾ.ಸು ಅವರು ಸ್ತ್ರೀವರ್ಣನೆಯನ್ನು 'ಹಂಸಗೀತೆ' ಕಾದಂಬರಿಯಲ್ಲಿ ತುಂಬಾ ಸೊಗಸಾಗಿ ತಂದಿದ್ದಾರೆ. ಸ್ತ್ರೀವರ್ಣನಾ ಶೈಲಿ ನಿರರ್ಗಳವಾಗಿ ಸಾಗುತ್ತದೆ. ಭಾವತೀವ್ರತೆಯನ್ನು ಉಂಟುಮಾಡುತ್ತದೆ. ಇದರ ಶೈಲಿಯ ಪದರ ಪದರವಾದ ವಿವರಗಳಲ್ಲಿ ಸ್ತ್ರೀಯ ಭಾವಚಿತ್ರ ಕಣ್ಮುಂದೆ ಸುಳಿಯುತ್ತದೆ.

**ಉದಾ:-*** "ಕೇದಿಗೆ ಕಾಂತಿಯಲ್ಲಿ ಗುಲಾಬಿತ ಹೊಳಪನ್ನು ಬೆರೆಸಿದ ಹಂತದಲ್ಲಿ ಕೆತ್ತಿದ ಮೈ, ಬಯಕೆಯ ಹೂ ಅರಳಿದಂತೆ, ಜಿರಿದ ಚೆಂದುಟಿಗೆ ತೋರು ಬೆರಳಂತೆ, ರಂಜಿಸುವ ಎಳೆಸಾದ ನಾಸಿಕ ಯೌವನ ಭರದಿಂದ ಮತ್ತನಾಗಿ; ಕಾಮ ಕಾಂತಿಯಿಂದ ಉಜ್ವಲವಾಗಿ, ಮಸೆ ಅಂಚಿನ ಅಲುಗಿನಂತೆ; ಬಿಳಿನೈದಿಲೆಯ ತೋಳಲ್ಲಿ ಸೆರೆಸಿಕ್ಕ ದುಂಬಿಯಂತೆ ಸಂಚರಿಸುವ ಚಂಚಲ ನೇತ್ರ".....

---

**ಅಡಿಟಿಪ್ಪಣಿ**

ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳ ಅಧ್ಯಯನ;

ಡಾ. ಹು.ರಾ. ಕೋಮಲವಲ್ಲಿ ಪುಟ ಸಂಖ್ಯೆ ೧೨೫

ಅ.ನ.ಕೃ ಅವರ ಕಾದಂಬರಿಯಲ್ಲಿ ಭಾಷೆ ಮತ್ತು ಶೈಲಿಯನ್ನು ಸರಳವಾದ ರೀತಿಯಲ್ಲಿ ಬಳಸಿದ್ದಾರೆ. ಭಾಷೆಯು ಸಂವಹನ ಸಾಧನವಾಗಿರುವುದರಿಂದ ಜನಪ್ರಿಯವಾದ ಜನರ ಆಡು ಭಾಷೆಯನ್ನೇ ತನ್ನ ಪ್ರಯೋಗದ ಕಡೆಗೆ ಸಾಗಿಸಿದ್ದಾರೆ.

ಅ.ನ.ಕೃ ಅವರು ಸಂಭಾಷಣೆ ಯಲ್ಲಿ ಗರಿಷ್ಠವಾದ ಪರಿಣಾಮಕಾರಿಯಾದ ಸಾಧ್ಯತೆಯನ್ನು ಸಾಧಿಸಿರುವವರು. ಈ ಕಾರಣಕ್ಕಾಗಿಯೇ ಅವರ ಕಾದಂಬರಿ ಓದುಗರ ಮೆಚ್ಚುಗೆಯನ್ನು ಗಳಿಸಿಕೊಂಡಿದೆ. ಅವರು ಮನುಷ್ಯ ಸ್ವಭಾವಗಳಿಗೆ ಕನ್ನಡಿ ಹಿಡಿಯುವಾಗ ಅವರ ಭಾಷೆ ವಿಶ್ಲೇಷಣಾಮುಖಿಯಾಗುತ್ತದೆ. ಭಾವಗಳನ್ನು ಉದ್ದೀಪಿಸುವ ಸಂದರ್ಭದಲ್ಲಿ ಅವರು ಇಡೀ ಸನ್ನಿವೇಶವನ್ನು ಸಂಭಾಷಣೆಯಲ್ಲಿ ನಿಯೋಜಿಸುವರು. ಒಮ್ಮೊಮ್ಮೆ ಓದುಗರ ಮನಸ್ಸನ್ನು ಪರವಶಗೊಳಿಸಿ ಬಿಡುತ್ತದೆ.

**ಉದಾ:-** "ಲಕ್ಷ್ಮಣಾ, ನೀನು ನನ್ನ ಶಿಷ್ಯನಾಗಿ ಬಂದದ್ದು ನನ್ನಭಾಗ್ಯ ಕಣಾಪ್ಪ, ನಿನ್ನ ವಿದ್ಯೆ ದೈವಿಕವಾದದ್ದು, ಸಂಗೀತಶಾಸ್ತ್ರ ವಿದ್ಯೆಯನ್ನು ಹೇಳಿಕೊಡುತ್ತೆ. ಅದು ನಿಜವಾದ ವಿದ್ಯೆಯಲ್ಲ, ವಿದ್ಯೆ ಹೃದಯದಿಂದ ಬರಬೇಕು ಹೃದಯಕ್ಕೆ ಸೇರಬೇಕು. ಅದು ನಿನ್ನಲ್ಲಿದೆ ನಿನ್ನಂತಹವನಿಗೆ ವಿದ್ಯಾದಾನ ಮಾಡಿದರೆ ನನ್ನ ಜನ್ಮ ಸಾರ್ಥಕವಾಗುತ್ತದೆ", ಎಂದು ಹೇಳಿರುವ ಮಾತುಗಳಲ್ಲಿ ಗುರುವಿನ ಭಾವ ವ್ಯಕ್ತವಾಗುವುದು. ಇದು ಓದುಗರ ಮನಸ್ಸಿಗೆ ಅರಿವಾಗುತ್ತದೆ.

ತ.ರಾ.ಸು ಅವರು ಸಹ ಅ.ನ.ಕೃ ಅವರಂತೆ ಭಾಷೆಯನ್ನು ಬಳಸುವುದರಲ್ಲಿ ನಿಪುಣರು. ಅವರಿಗೆ ಸಮಾನವಾಗಿ ಭಾಷೆಯನ್ನು ತಮ್ಮ ಕಾದಂಬರಿಯಲ್ಲಿ ತಂದಿದ್ದಾರೆ. ಇವರ ಶೈಲಿಯಲ್ಲಿ ಸತ್ಯತೆ ಇದೆ. ಸುಭಗತೆ ಇದೆ. ಹಂಸಗೀತೆ ಕಾದಂಬರಿಯಲ್ಲಿ ನಿರೂಪಣಾ ಶೈಲಿ ಅತ್ಯಂತ ರಭಸವಾಗಿ ಹರಿಯುವ ಭೋರ್ಗರೆವ ನದಿಯಂತೆ ಮತ್ತು ವೈವಿಧ್ಯಪೂರ್ಣವಾದ ಶೈಲಿಯನ್ನು ಗುರುತಿಸಬಹುದು. ಯಾವುದೇ ಒಂದು ವಿಷಯವನ್ನಾದರೂ ವಿವರ ವಿವರವಾಗಿ ನಿರೂಪಿಸುವುದರಲ್ಲಿಯೇ ಕಾದಂಬರಿಕಾರನಿಗೆ ತೃಪ್ತಿ. 'ಹಂಸಗೀತೆ'ಯಲ್ಲಿ ಭೈರವಿ ವೆಂಕಟಸುಬ್ಬಯ್ಯನ ಸಂಗೀತದ ಸಾಧನೆ ಕುರಿತು ಹೇಳುವ, ಸಂಗೀತದ ಮೇಲಿನ ಅಭಿಮಾನ ದೈವಿಕವಾದುದ್ದು ಮತ್ತು ಸರಳ ಶೈಲಿಯಲ್ಲಿಯೂ ಈ ಭಾಗ ವ್ಯಕ್ತವಾಗುತ್ತದೆ.

**ಉದಾ;-** ವೆಂಕಟಸುಬ್ಬಯ್ಯ ಸಂಗೀತದ ಬಗೆಗೆ ಹೇಳುವ ಮಾತುಗಳು ಮೇಲಿನ ಮಾತಿನ ಭಾವಕ್ಕೆ ಸಮೀಪವರ್ತಿಯಾದದ್ದು.

"ನವಾಬರ ದೃಷ್ಠಿಯಲ್ಲಿ ನಮ್ಮಂತ ಸಾಮಾನ್ಯ ಜನರ ವಿದ್ಯೆ, ನವಾಬರು ಬಯಸಿದಾಗ,

ಬಯಸಿದಲ್ಲಿಗೆ ತಮ್ಮ ಭೋಗಕ್ಕೆ ಬರುವ ಬೆಲೆವೆಣ್ಣು ಎಂದಿರಬಹುದು. ಆದರೆ ನಮ್ಮ ದೃಷ್ಠಿಯಲ್ಲಲ್ಲ. ಅದು ನಮ್ಮ ತಾಯಿ. ದೇವರು ಅಲ್ಲಾನ ದರ್ಶನಕ್ಕೆ ನವಾಬರು ಮಸೀದಿಗೆ ಹೋಗಬೇಕಾದಂತೆ, ನಮ್ಮ ತಾಯ ದರ್ಶನಕ್ಕೆ ಆಕೆಯ ಮಂದಿರಕ್ಕೆ ಭಕ್ತರಾಗಿ ಕೈಮುಗಿದು ಬರಬೇಕು... ಭೋಗ ತೃಪ್ತಿಯ ಪಾಪಪಂಕವಾದ ಜ್ಞಾನದಲ್ಲಿ ನಮ್ಮ ತಾಯಿಯ ನರ್ತನ ಮಾಡಿಸಲಾರೆ".

ಅ.ನ.ಕೃ ಅವರು ಒಳ್ಳೆಯ ಕಥನಕಾರರಾಗಿರುವುದರಿಂದ ಸ್ವತಃ ಕಥೆ ನಿರೂಪಿಸುವುದು ಅವರ ಕಾದಂಬರಿಯ ರಚನಾ ವಿಧಾನ ಮತ್ತು ಶೈಲಿ, ಕಥೆಯ ನಿರೂಪಣೆ ಸ್ವಾರಸ್ಯಕರವಾದುದ್ದು. ನಿರೂಪಣೆಯ ನಡುವೆ ಪಾತ್ರಗಳ ಸಂಭಾಷಣೆಯನ್ನು ತರುವರು. ಅವರ ಕಾದಂಬರಿಯ ಜಾಯಮಾನವೆಂದರೆ, ಅವು ಸಂಭಾಷಣಾ ಪ್ರಧಾನವಾಗಿರುವುದು. ಅ.ನ.ಕೃ ಅವರ ಕಾದಂಬರಿಯಲ್ಲಿನ ಸಂಭಾಷಣೆಯಿಂದಾಗಿ ಓದುಗರು ಆಕರ್ಷಿತರಾಗುತ್ತಾರೆ. ಆ ಮೂಲಕ ಜನರಲ್ಲಿ ಓದುವ ಅಭಿರುಚಿಯನ್ನು ಹುಟ್ಟಿಸಿದರು. ಪುಟ್ಟ ಪುಟ್ಟ ಸಂಭಾಷಣೆಯು ಅ.ನ.ಕೃ ಅವರ ಕಾದಂಬರಿಯ ಜೀವಾಳವಾಯಿತು.

ತ.ರಾ.ಸು ಅವರದು ಅಲಂಕೃತವಾದ ಶೈಲಿ, ನಿರರ್ಗಳವಾದ ಶೈಲಿ ಅಪಾರವಾದ ಪದಸಂಪತ್ತು ವಿಶಿಷ್ಟವಾದ ಘಟನೆಗಳನ್ನು ಓದುಗರ ಮುಂದೆ ತಂದು ನಿಲ್ಲಿಸುತ್ತದೆ. ಗ್ರಾಮ ಭಾಷೆ, ಅಲಂಕಾರಿಕ ಸತ್ವನಿಷ್ಠ ಭಾಷೆ, ಪ್ರಯೋಗವೂ ಅಭಿರುಚಿ ಸೃಜನಶೀಲ ಅಭಿವ್ಯಕ್ತಿಗೆ ಕಾರಣವಾಗಿದೆ. ಸರಳವಾದ ಭಾಷೆಯಲ್ಲಿ ಆಯಾ ಪಾತ್ರಗಳ ಸ್ವಭಾವವನ್ನು, ವ್ಯಕ್ತಿತ್ವವನ್ನು ತಿಳಿಸುತ್ತದೆ.

ಸಂಧ್ಯಾರಾಗ  ಕಾದಂಬರಿಯ ಪಾತ್ರಗಳಲ್ಲಿ ಬರುವ ಸಂಭಾಷಣೆಯಲ್ಲಿ ಮೋಹಕತೆ ಅಥವಾ ಆ ಪಾತ್ರದ ನಿಲುವು ಓದುಗರಿಗೆ ಅರ್ಥವಾಗುವಂತೆ ಚಿತ್ರಿಸಿದ್ದಾರೆ. ಒಂದು ಸರಳ ಸನ್ನಿವೇಶ ನಿರ್ಮಾಣ ಮಾಡುವ ಸಂದರ್ಭದಲ್ಲಿ ಮನಸ್ಸು ಆ ಪಾತ್ರದ ಸನ್ನಿವೇಶ ಅಥವಾ ಕಥೆಯ ಸನ್ನಿವೇಶದ ನಡುವೆ ಅಪ್ರಸನ್ನವಾಗಿ ಬಿಡುತ್ತದೆ. ಅಷ್ಟರಮಟ್ಟಿಗೆ ಇವರು ಕಾದಂಬರಿಯಲ್ಲಿ ಭಾವನೆಯನ್ನು ಸಂಚಲನಗೊಳಿಸುವಂತೆ ಮಾಡುವ ಶಕ್ತಿ ಅವರಿಗಿದೆ.

ತ.ರಾ.ಸು ಅವರ ಲೇಖನ ಅ.ನ.ಕೃ ಅವರಿಗಿಂತ ಹೆಚ್ಚು ಪ್ರಖರವಾದುದು. ನಿರೂಪಣಾ ಶೈಲಿಯಲ್ಲಿ ಅ.ನ.ಕೃ ರವರಿಗಿಂತ ಭಿನ್ನವಾಗಿಯೇ ತಮ್ಮ ಕಾದಂಬರಿಯಲ್ಲಿ ಹೇಳಬೇಕಾದುದನ್ನು ಎಷ್ಟು ಬಗೆಯಲ್ಲಿ ಹೇಳಿದರೂ ಅವರಿಗೆ ತೃಪ್ತಿಯಿಲ್ಲ. ೧"ರಸಾತಳಕ್ಕೆ ಚಿಮ್ಮುವ ಸೀಸದ ಗುಂಡಿನಂತೆ ಮುಂದೆ ಸಾಗಿದಂತೆಲ್ಲಾ ಅವರ ಲೇಖನಗಳಿಗೆ ಹೆಚ್ಚು ವೇಗ, ಉದ್ವೇಗ".೧ ಎಷ್ಟೇ ವಿವರಣಾತ್ಮಕವಾಗಿ ಕಥೆ ಸಾಗಿದ್ದರೂ ಎಲ್ಲವೂ ನೀರಸ, ಬೇಸರ ಎನಿಸುವುದಿಲ್ಲ.

ಹೀಗೆ ಅ.ನ.ಕೃ ಹಾಗೂ ತ.ರಾ.ಸು ಅವರು ತಮ್ಮ ಕಾದಂಬರಿಗಳಲ್ಲಿ ಭಾಷೆ ಮತ್ತು ಶೈಲಿಗಳೆರಡನ್ನೂ ಸುಲಭವಾದ ರೀತಿಯಲ್ಲಿ ಬಳಸಿದ್ದಾರೆ. ಇವರ ಕಾದಂಬರಿಯ ವಸ್ತು ಒಂದೇ ಆದರೂ ನಿರೂಪಣಾ ಶೈಲಿ ವೈವಿಧ್ಯತೆಯಿಂದ ಕೂಡಿದೆ. ಇವರು ಆಡುಭಾಷೆಯನ್ನೇ ಬಳಸಿ ಕಾದಂಬರಿಯ ಬೆಳವಣಿಗೆಗೆ ಕಾರಣರಾಗಿದ್ದಾರೆ. ನಿರೂಪಣಾ ಶೈಲಿಯಿಂದಾಗಿ ಈ ಕಾದಂಬರಿಗಳಲ್ಲಿ ಬರುವ ಪಾತ್ರ, ಸನ್ನಿವೇಶ ಮುಂತಾದವುಗಳು ಮುಖಾಂತರ ಓದುಗರನ್ನು ತಲ್ಲೀನರಾಗುವಂತೆ ಮಾಡಿದ್ದಾರೆ. ಸಂಭಾಷಣೆಯ ಚಾತರ್ಯ, ಕಥಾಕೌಶಲ, ನಿರರ್ಗಳವಾದ ಶೈಲಿ ಇವುಗಳ ಮೂಲಕ ಓದುಗರ ಮನಸ್ಸನ್ನು ಸೆರೆಹಿಡಿದಿದ್ದಾರೆ.

ನೃತ್ಯವಾಗಲಿ, ಸಂಗೀತವಾಗಲಿ ಅದರ ಬಗೆಗಿನ ಅಭಿಮಾನ ದೈವಿಕವಾದುದೆಂದು ನಂಬಿದವರು ತ.ರಾ.ಸು ಮತ್ತು ಅ.ನ.ಕೃ ಅವರು. ಸಂಗೀತದ ವಿಚಾರ ಮಾತನಾಡುವಾಗಲೆಲ್ಲ ಕಲೆಯನ್ನು ದೈವತ್ವಕ್ಕೆ ಏರಿಸಿರುವುದರಿಂದ ಅದರ ಬಗೆಗೆ ಗೌರವಾದರಗಳು ಮೂಡುತ್ತವೆ. ಸರಳ ಶೈಲಿಯಲ್ಲಿಯೂ ಕಾದಂಬರಿ ಪಾತ್ರಗಳ ಭಾವವನ್ನು ಅಭಿವ್ಯಕ್ತಗೊಳಿಸುವಂತೆ ಮಾಡಿದ್ದಾರೆ.

"ಇವರ ಶೈಲಿಯಲ್ಲಿ ಕಂಡುಬರುವ ಕಾವು ಮತ್ತು ಕಾವ್ಯಮಯತೆ ತನಗೆ ತಾನೆ ಅಪೂರ್ವವಾಗಿದೆ." ಈ ಮಾತು ಅವರ ವರ್ಣನೆಗಳಿಗೆ ಸ್ಪಷ್ಟವಾಗಿ ಅನ್ವಯಿಸುತ್ತದೆ. ಸಂಗೀತದ ವರ್ಣನೆಯಲ್ಲಂತೂ ಲೇಖಕರು ಭಾವುಕರಾಗುತ್ತಾರೆ, ಭಕ್ತರಾಗುತ್ತಾರೆ. ಆ ಭಾವುಕತೆ ಬರಹದಲ್ಲೂ ಅಭಿವ್ಯಕ್ತಗೊಂಡು ಗದ್ಯವು ಪದ್ಯದಂತೆ ಕಾವ್ಯ ಸ್ವಂದರ್ಯದಿಂದ ಕಂಗೊಳಿಸುತ್ತದೆ. ಶೃತಿಬದ್ಧ ವೀಣೆಯ ಸಾದದಂತೆ ಮನಸೆಳೆಯುತ್ತದೆ. ಗಂಭೀರ ಶೈಲಿಯ ನಿರೂಪಣೆಗೆ ಮೆರಗನ್ನು ತಂದುಕೊಡುತ್ತದೆ.

ಧಾರ್ಮಿಕ ಕಾದಂಬರಿಯಾಗಿರಲಿ, ಸಾಮಾಜಿಕ ಕಾದಂಬರಿಯಾಗಿರಲಿ ಸಂಗೀತದ ಭಕ್ತರನ್ನು ಚಿತ್ರಿಸುವಾಗ ತ.ರಾ.ಸು. ಮತ್ತು ಅ.ನ.ಕೃ ಅವರ ಶೈಲಿ ಭಾವುಕವಾಗುತ್ತದೆ. ಭಕ್ತರು ಭಕ್ತಿಭಾವಗಳಲ್ಲಿ ಮಗ್ನರಾಗುವ ಸನ್ನಿವೇಶವಂತೂ ಎಂತಹವರನ್ನೂ ಮಂತ್ರಮುಗ್ಧರನ್ನಾಗಿಸುತ್ತದೆ. ಇದರ ಕಾದಂಬರಿಯ ಭಕ್ತರೆಲ್ಲಾ ಸಾತ್ವಿಕ ಭಕ್ತರು, ಅವರಲ್ಲಿ ಅರ್ಹತೆ ಇದೆ, ಮಾರ್ದವತೆ ಇದೆ, ಧ್ವನಿ ರಮ್ಯತೆ ಇದೆ. ದೇವಿ ವಿಗ್ರಹ ಕ/ಮಡು ರೋಮಾಂಚನಗಳ್ಳುವ, ಸ್ತೋತ್ರ ಪಠಣದಲ್ಲಿ ಪರವಶವಾಗುವ, ಜಾಗೃತ-ಸುಷುಪ್ತಿಗಳಲ್ಲೂ ಸ್ತೋತ್ರರವನ್ನು ಪಠಿಸುವ ಭಕ್ತರೇ ಹೆಚ್ಚು, ಸ್ತೋತ್ರ ಪಠಣ ಮಾಡುವ ವ್ಯಕ್ತಿಗಳು ನಿರರ್ಗಳವಾಗಿ, ಭಾವುಕರಾಗಿ, ಗಂಭೀರವಾಗಿ ಹಾಡುತ್ತಾರೆ.

ಯಾವುದೇ ಒಂದು ವಿಷಯವನ್ನಾದರೂ ವಿವರ ವಿವರವಾಗಿ ನಿರೂಪಿಸುವುದರಲ್ಲಿಯೇ ಲೇಖಕರಿಗೆ ತೃಪ್ತಿ. ತ.ರಾ.ಸು. ಮತ್ತು ಅ.ನ.ಕೃ ಅವರ ಲೇಖನ ಹೆಚ್ಚು ಪ್ರಖರವಾದದ್ದು ಮತ್ತು ನಿರೂಪಣೆ ಹೆಚ್ಚು ಧಾರಣ. ಹೇಳಬೇಕಾದುದನ್ನು ಎಷ್ಟು ಬಗೆಯಲ್ಲಿ ಒತ್ತಿ ಹೇಳಿದರೂ ತೃಪ್ತಿಯಿಲ್ಲ.

---

**ಅಡಿ ಟಿಪ್ಪಣಿ**

1. ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳು ಒಂದು ಅಧ್ಯಯನ

   ಡಾ. ಹು.ರಾ. ಕೋಮಲದಲ್ಲಿ (ಪು.ಸಂ.೧೫)

2. ಅದೇ ಕೃತಿ [ಪು.ಸಂ.೧೪೨]

# ಸಮಾರೋಪ

ಅ.ನ.ಕೃ ಮತ್ತು ತ.ರಾ.ಸು ಅವರು ಪ್ರಗತಿಶೀಲ ಸಾಹಿತ್ಯದಲ್ಲಿ ಕಂಡುಬರುವ ಪ್ರಮುಖ ಕಾದಂಬರಿಕಾರರು. ಈ ಕ್ಷೇತ್ರದಲ್ಲಿ ಇವರು ಹೊಸಲೇಖಕರ ಗುಂಪನ್ನೇ ನಿರ್ಮಿಸಿದರು. ಸಾಹಿತ್ಯಕ್ಕೆ ಒಂದು ಹೊಸ ತಿರುವನ್ನು ತಂದುಕೊಟ್ಟವರು. ಕನ್ನಡ ನಾಡಿನ ಏಕೀಕರಣಕ್ಕಾಗಿ, ಏಕೀಕೃತ ನಾಡಿನ ಪ್ರಗತಿಗಾಗಿ ತಮ್ಮ ಜೀವನವನ್ನು ಮುಡಿಪಾಗಿಟ್ಟಿದ್ದರು. ಕನ್ನಡ ನಾಡಿನಲ್ಲಿ ಜನಪ್ರಿಯರಾಗಿ ಐದು ದಶಕಗಳ ಕಾಲ ಕನ್ನಡವನ್ನು, ಕರ್ನಾಟಕವನ್ನು ಕಟ್ಟಲು ಶ್ರಮಿಸಿದರು. ಪ್ರಗತಿಶೀಲ ಸಾಹಿತ್ಯ ಚಳುವಳಿ ಕನ್ನಡ ಸಾಹಿತ್ಯದ ಹೊಸ ತಿರುವಿಗೆ, ಲವಲವಿಕೆಗೆ, ವಾಗ್ವಾದಕ್ಕೆ ಕೇಂದ್ರಬಿಂದುವಾಗುವಂತೆ ಮಾಡಿದರು.

ಇವರು ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ನವೀನ ಪ್ರಯೋಗವನ್ನು ನಡೆಸಿದ್ದಾರೆ. ಆದರೆ ಇವರಿಗೆ ಕೀರ್ತಿಯನ್ನು ತಂದುಕೊಟ್ಟಿದ್ದು ಕಾದಂಬರಿ ಮಾಧ್ಯಮ. ಬರವಣಿಗೆಯನ್ನು ವೃತ್ತಿಯನ್ನಾಗಿಸಿಕೊಂಡು ಕಾದಂಬರಿಗಳನ್ನು ಬರೆಯುತ್ತಾ ಹೋದರು. ಕನ್ನಡಿಗರಿಗೆ ಕನ್ನಡದ ಮೇಲೆ ಅಭಿಮಾನ ಮೂಡಿಸುವ ಪ್ರಯತ್ನದಲಿ ತಮ್ಮ ಇಡೀ ಪ್ರತಿಭೆಯನ್ನು, ಸಾಮರ್ಥ್ಯ ಧಾರೆಗಳನ್ನು ಧಾರೆ ಎರೆದರು. ಇವರ ಹೆಸರು ಕನ್ನಡಿಗರ ಮನದಲ್ಲಿ ಅಚ್ಚಳಿಯದೆ ಉಳಿಯಲು ಕಾರಣ ಇವರು ಮಾಡಿದ ಸಮಾಜ ನಿರ್ಮಾಣ, ಕನ್ನಡನಾಡು ಮರೆಯಲಾಗದ ಸಾಂಸ್ಕೃತಿಕ ಸೇನಾನಿಗಳು ಇವರು ಎಂದರೆ ತಪ್ಪಾಗಲಾರದು. ಇವರು ಕಾಲೇಜು ಮೆಟ್ಟಿಲು ಹತ್ತಿದವರಲ್ಲ ಅವರು ಓದಿಗೆಂದು ಓದಿದವರಲ್ಲ, ಓದು ಅವರ ಅಂತರಂಗದ ಹಸಿವು ಬಹಿರಂಗದ ಕ್ರಿಯೆ, ಹೀಗಾಗಿ ಅವರು ಶಾಲೆ ಒಳಗಿನಾವರಣದಲ್ಲಿ ಕಲಿತದ್ದಕ್ಕಿಂತ ಹೆಚ್ಚಾಗಿ ಹೊರಗಿನ ಲೌಕಿಕ ಪ್ರಪಂಚದಿಂದ ಸ್ವಯಂ ಓದಿನಿಂದ ಕಲಿತದ್ದು ಹೆಚ್ಚು. ತಮ್ಮ ಪರಿಶ್ರಮದಿಂದ ಖ್ಯಾತ ಕಾದಂಬರಿಕಾರರಾದರು. ಇವರ ಸಾಹಿತ್ಯದ ಸೇವೆಯನ್ನು ಗುರುತಿಸಿ ಹಲವಾರು ಪ್ರಶಸ್ತಿಗಳು ಕೂಡ ದೊರೆತಿವೆ.

ಇವರು ಹೊಸ ಸಮಾಜದ ಏಳಿಗೆಗಾಗಿ ಭಾಷಣಗಳನ್ನು ಮಾಡಿದರು ಕರ್ನಾಟಕ ಹಾಗೂ ಅದರ ಹೊರಗೆ ಪ್ರವಾಸ ಕೈಗೊಂಡದ್ದು, ಕನ್ನಡ ಸಂಯುಕ್ತ ರಂಗದ ಮುಂಚೂಣಿಯ ನಾಯಕರಾಗಿ ಸಾಂಸ್ಕೃತಿಕ ಚಳುವಳಿಯೊಂದನ್ನು ಕರ್ನಾಟಕದ ರಾಜಧಾನಿ ಬೆಂಗಳೂರಿನಲ್ಲಿ ಸಂಘಟಿಸಿದ ಸಂದರ್ಭದಲ್ಲಿ ವೈವಿಧ್ಯಮಯವಾದ ಜನರ ಸಂಪರ್ಕದಲ್ಲಿ ಅವರ ಅನುಭವದ ಕೋಶ ವಿಸ್ತರಿಸಿತು. ಇವರ ಓದುವಿಕೆಯ ಪ್ರಪಂಚ ವಿಸ್ತರಿಸುವುದಕ್ಕೆ ಮುಖ್ಯ ಪ್ರೇರಣೆಯಾಯಿತು. ಅವರು ತಮ್ಮ ಸುತ್ತಾಟದಲ್ಲಿ ಚಳುವಳಿಯ ಸಂಘಟನೆಯ ಸಂದರ್ಭದಲ್ಲಿ ಬದುಕಿನ ವೈವಿಧ್ಯತೆಯನ್ನು ತಿಳಿದು ಬೆರಗಾದವರು.

ತಮ್ಮ ಓದು ಅನುಭವಗಳ ಹಿನ್ನಲೆಯಲ್ಲಿ ಸಮಸ್ಯೆಗಳ ಪರಿಹಾರಕ್ಕೆ ತೊಡಗಿದವರು. ಹೀಗಾಗಿ ಬದುಕಿನ ನೋವು-ನಲಿವುಗಳು, ಸಮಸ್ಯೆಗಳು, ವರ್ತನೆಗಳು, ಅವರ ವಿಚಾರಧಾರೆಗಳು ಇವರ ಭಾವಕೋಶವನ್ನು ಶ್ರೀಮಂತಗೊಳಿಸಿದವು. ಅವರ ಕಾದಂಬರಿಗಳಿಗೆ ವಸ್ತುಗಳನ್ನಾಗಿ ಇವರು ಇವುಗಳನ್ನೇ ಆಯ್ಕೆ ಮಾಡಿಕೊಂಡರು. ಸಂಗೀತಗಾರರು, ಸಾಹಿತಿಗಳು, ಕಲಾವಿದರು, ನೃತ್ಯಗಾರರು, ವೇಶ್ಯೆಯರು ಇವರ ಕಾದಂಬರಿಗಳ ವಸ್ತು ಪಾತ್ರಗಳಾಗುವರು. ಹೀಗೆ ಅ.ನ.ಕೃ ತ.ರಾ.ಸು ಅವರು ಜನ ಸಾಮಾನ್ಯರ ಬದುಕಿನ ಚಿತ್ರಣಗಳನ್ನೇ ತಮ್ಮ ಕಾದಂಬರಿಯಲ್ಲಿ ತಂದರು. ಹೀಗೆ ನಿರಂತರ ಅಧ್ಯಯನದಿಂದ ಪಡೆದುಕೊಂಡ ಅಪಾರವಾದ ಜೀವನಾನುಭವ ಬದುಕಿನ ಅನಿವಾರ್ಯತೆ, ಬರೆಯಬೇಕೆಂಬ ತುಡಿತ-ಮಿಡಿತಗಳು ಕಾದಂಬರಿಕಾರರನ್ನಾಗಿ ರೂಪಿಸಿದವು. ಕಾದಂಬರಿ ಕ್ಷೇತ್ರದಲ್ಲಿ ಹೊಸ ಹೊಸ ಛಾಪು ಮೂಡಿಸುವಲ್ಲಿ ಯಶಸ್ವಿಯಾದರು.

ಅ.ನ.ಕೃ ಮತ್ತು ತ.ರಾ.ಸು. ಅವರ ಜೀವನ ಮತ್ತು ಸಾಧನೆ ಯನ್ನು ಸೃಜನಶೀಲ ವ್ಯಕ್ತಿತ್ವ, ಬರವಣಿಗೆ ಹಾಗೂ ಕನ್ನಡ ಸಾಹಿತ್ಯದಲ್ಲಿ ಅವರ ಸ್ಥಾನ ಇವುಗಳನ್ನು ವಿಶ್ಲೇಷಿಸುವ ಪ್ರಯತ್ನವನ್ನು ಮಾಡಲಾಗಿದೆ. ಈ ಎರಡೂ ಕಾದಂಬರಿಗಳಲ್ಲಿ ಸಂಗೀತಗಾರನು ಸಮಸ್ಯೆಗಳ ವಿರುದ್ಧ ಹೋರಾಡಿ ಪ್ರಗತಿಯ ಕಡೆಗೆ ಸಾಗುವುದನ್ನು ಕಾದಂಬರಿಕಾರರು ಓದುಗರ ಮನಮುಟ್ಟುವಂತೆ ಚಿತ್ರಿಸಿದ್ದಾರೆ. ಆಡು ಭಾಷೆಯಲ್ಲಿಯೇ ಇದನ್ನು ನಿರೂಪಿಸಿರುವುದು ಅವರ ಪ್ರತಿಭೆಗೆ ಹಿಡಿದ ಕನ್ನಡಿಯಂತಿದೆ.

ಅ.ನ.ಕೃ ಮತ್ತು ತ.ರಾ.ಸು ಅವರು ಹಲವಾರು ಧೃಷ್ಠಿ ಕೋನದಿಂದ ಬೇರೆ ಕಾದಂಬರಿಕಾರರಿಗಿಂತ ಭಿನ್ನರಾಗಿ, ವಿಶಿಷ್ಠರಾಗಿದ್ದಾರೆ. ಕಥೆ ಕಾದಂಬರಿಗಳ ವಸ್ತು ನಿರ್ವಹಣೆ, ಸನ್ನಿವೇಶ, ಪಾತ್ರ ಚಿತ್ರಣ ಇವುಗಳಲ್ಲಿ ಇವರು ತೋರುವ ಕಲಾತ್ಮಕತೆ ಎದ್ದು ಕಾಣುವಂಥದ್ದು. ಪಾತ್ರ ಚಿತ್ತಣ ಮಾಡುವಾಗಲಂತೂ ವ್ಯಕ್ತಿ ಮನದಾಳದ ಮೂಲೆ ಮಗ್ಗುಲುಗಳನ್ನು ಶೋಧಿಸಿ ಅಲ್ಲಿ ಅಂತಸ್ತವಾಗಿರುವ ಭಾವ ಸಾಮ್ರಾಜ್ಯದ ಸೂಕ್ಷ್ಮಾತಿಸೂಕ್ಷ್ಮ ವಿವರಗಳನ್ನು ತಮ್ಮ ಪ್ರತಿಭೆಯ ನೈಜಗಣ್ಣಿನಿಂದ ದರ್ಶಿಸಿ ಅವುಗಳನ್ನು ಚಿತ್ತವತ್ತಾಗಿ ಕಾದಂಬರಿಯಲ್ಲಿ ಅರಳಿಸಿಕೊಡುತ್ತಾರೆ.

ಕೊನೆಯದಾಗಿ ಹೇಳುವುದಾದರೆ ಇವರ ಪ್ರಚಂಡ ವಾಗ್ಮಿತೆ, ದೀರ್ಘಕಾಲದ ಓದು, ನೆನಪಿನ ಅಗಾಧತೆ, ಕರ್ನಾಟಕದಾದ್ಯಂತ ಅವರಿಗಿದ್ದ ಮಿತ್ರ ಬಳಗ, ಕಾಲಿಗೆ ಚಕ್ರಕಟ್ಟಿಕೊಂಡು ನಾಡು-ನುಡಿ ಸಾಹಿತ್ಯ ಇವು ಜಂಗಮವಾಗಿ ಸಂಭ್ರಮಿಸಿದ್ದುದು, ಪ್ರಖರ ವೈಚಾರಿಕತೆ ಎಲ್ಲಾ ಧರ್ಮಗಳನ್ನು ಪ್ರೀತಿಸುವ ಗುಣ ಬರೆದೇ ಬದುಕುವೆ ಎನ್ನುವ ಛಲ-ಇವೆಲ್ಲಾ ಇವರನ್ನು ನೆನಪಿಸಿಕೊಂಡಾಗ ಸಾಲು

ದೀಪಾಗಳಾಗಿ ಕಣ್ಣುಮುಂದೆನಿಲ್ಲುತ್ತವೆ. ಅವರದು ಹೋರಾಟದ ಬದುಕು ನಿಜ, ಆದರೆ ಇವರು ಸಾಹಿತಿಯಾಗಿ ಇವರ ಕಾದಂಬರಿಯಲ್ಲಿ ಬರುವ ನಾಯಕರಂತೆ ನಮ್ಮ ನೆನಪಿನಾಳದಲ್ಲಿ ಉಳಿದುಬಿಟ್ಟರು.

ಹಿರಿಯರು ಒಂದು ಮಾತನ್ನು ಯಾವಾಗಲೂ ಹೇಳುತ್ತಿರುತ್ತಾರೆ. "ಸಾಹಿತ್ಯ ಓದು, ತರ್ಕ ಬದ್ಧವಾಗಿ ಆಲೋಚಿಸುವುದನ್ನು ಕಲಿ, ವಿವೇಕಿಯಾಗಿ". ಅದು ಎಂದಿಗೂ ಸತ್ಯ. ನಮ್ಮಲ್ಲಿ ಪಾಂಡಿತ್ಯ ಉಳ್ಳವರು ಹಲವರು, ಆದರೆ ವಿವೇಕಿಗಳು ಕಡಿಮೆ. ಸಾಹಿತ್ಯ ಮಾನವನ ಜೀವನ ಶೈಲಿಯನ್ನೇ ಬದಲಿಸುತ್ತದೆ. ಸಾಹಿತ್ಯಕ್ಕೆ ಸದೃಢ ಸಮಾಜ ಕಟ್ಟುವ ಶಕ್ತಿಯಿದೆ ಎಂಬ ಮಾತು ಈ ಎರಡೂ ಕಾದಂಬರಿಗಳನ್ನು ಅಧ್ಯಯನ ಮಾಡಿದಾಗ ತಿಳಿದು ಬರುತ್ತದೆ.

# ಆಕರ ಗ್ರಂಥಗಳು


ಸಂಧ್ಯಾರಾಗ – ಅ.ನ.ಕೃಷ್ಣರಾಯ

ಮೊದಲನೆ ಮುದ್ರಣ-೧೯೩೯

ಮೂವತ್ತೆರಡನೆಯ ಮುದ್ರಣ-೨೦೧೩

ಪ್ರಕಾಶಕರು – ಅಂಕಿತ ಪುಸ್ತಕ

ಹಂಸಗೀತೆ – ತ.ರಾ. ಸುಬ್ಬರಾವ್

ಪ್ರಥಮ ಮುದ್ರಣ-೧೯೮೪

ಹದಿನಾರನೇ ಮುದ್ರಣ-೨೦೦೨

ಪ್ರಕಾಶಕರು – ಹೇಮಂತ ಸಾಹಿತ್ಯ.

## ಪರಾಮರ್ಶನ ಗ್ರಂಥಗಳು


೧. ಅ.ನ.ಕೃ ಬದುಕು ಬರಹ-ಡಾ.ಎಸ್.ವಿದ್ಯಾಶಂಕರ, ಪ್ರಿಯದರ್ಶಿನಿ ಪ್ರಕಾಶನ ಮೊದಲವೆ ಮುದ್ರಣ-೨೦೧೦

೨. ಕನ್ನಡ ಸಾಹಿತ್ಯ ಅವಲೋಕನ-ಡಾ.ಎಸ್.ಎಸ್. ಭಗತಿ ಮತ್ತು ಡಾ. ಹೆಚ್.ಎಸ್. ಮೇಲಿನಮನಿ, ವಿದ್ಯಾನಿಧಿ ಪ್ರಕಾಶನ ಗದಗ್. ೨೦೦೯

೩. ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳ ಒಂದು ಅಧ್ಯಯನ. ಡಾ.ಹು.ರಾ.ಕೋಮಲವಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಪ್ರಥಮ ಮುದ್ರಣ-೨೦೦೮

೪. ತ.ರಾ.ಸು. ಸಾಹಿತ್ಯ ಒಂದು ಅಧ್ಯಯನ-ಡಾ.ಎಂ.ಎನ್.ಮಹೇಶ. ಹೇಮಂತ ಸಾಹಿತ್ಯ ಪ್ರಕಾಶನ. ಪ್ರಥಮ ಮುದ್ರಣ-೨೦೦೯

೫. ಸಂಧ್ಯಾರಾಗ ಅ.ನ.ಕೃಷ್ಣರಾಯ ಅಂಕಿತ ಪುಸ್ತಕ ಪ್ರಕಾಶನ. ಮೊದಲನೆ ಮುದ್ರಣ-೧೯೩೫, ಮೂವತ್ತೆರಡನೆ ಮುದ್ರಣ-೨೦೧೩

೬. ಸಾಲು ದೀಪಗಳು -ಪ್ರಧಾನ ಸಂಪಾದಕರು-ಡಾ ಜಿ.ಎಸ್,ಶಿವರುದ್ರಪ್ಪ ಕರ್ನಾಟಕ ಸಾಹಿತ್ಯ ಅಕಾಡೆಮಿ-ಮೊದಲ ಮುದ್ರಣ -೧೯೯೦ ಬೆಂಗಳೂರು-೫೯೦೦೨೭

೭. ಹಂಸಗೀತೆ- ತ.ರಾ.ಸುಬ್ಬರಾವ್. ಹೇಮಂತ್ ಸಾಹಿತ್ಯ ಪ್ರಕಾಶನ. ಪ್ರಥಮ ಮುದ್ರಣ -೧೯೪೫. ಹದಿನಾರನೇ ಮುದ್ರಣ-೨೦೦೭

೮. ಹಿಂದಿರುಗಿ ನೋಡಿದಾಗ- ತ.ರಾ.ಸು ಮತ್ತು ಅಂಬುಜಾ ತ.ರಾ.ಸು ಪ್ರಕಾಶಕರು ತಾ.ರಾ. ನಾಗರಾಜ್, ಮುದ್ರಣ-೨೦೦೧